# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಏಪ್ರಿಲ್ ೨೪, ೨೦೧೪ (ವೈಶಾಖ ೪, ಶಕ ವರ್ಷ ೧೯೩೬)<br>Bangalore, Thursday, April 24, 2014 (Vaishakha 4, Shaka Varsha 1936) | ಸಂಚಿಕೆ ೧೭<br>Issue 17 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು 2014–2020ರ ಅವಧಿಯಲ್ಲಿ ಒಟ್ಟು 9900 ಹೆಕ್ಟೇರ್ ಪ್ರದೇಶದಲ್ಲಿ ರೂ. 7383.221 ಲಕ್ಷಗಳ ವೆಚ್ಚದಲ್ಲಿ ಪಲ್ಪ್‌ವುಡ್ ನೆಡುತೋಪು ಬೆಳೆಸುವ ಯೋಜನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ : ಕಅಅನಿನಿ/ಎ3/ಪ.ವು.ಪ್ರಾ/2014–18/2013–14/712, ದಿನಾಂಕ : 03–07–2013.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 03–07–2014ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರು ರಾಜ್ಯದಲ್ಲಿ ಮರ ಆಧಾರಿತ ಅನೇಕ ಉದ್ದಿಮೆಗಳು ಕಚ್ಚಾ ವಸ್ತುವಿನ ತೀವ್ರ ಅಭಾವವನ್ನು ಎದುರಿಸುತ್ತಿದ್ದು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸಲಾದ ಒಟ್ಟು 51758.39 ಹೆ. ವಿಸ್ತೀರ್ಣದಲ್ಲಿ ಖಾಲಿ ಇರುವ ಅರಣ್ಯ ಪ್ರದೇಶವನ್ನು ಸದುಪಯೋಗಪಡಿಸಿಕೊಂಡು ಆಂತರಿಕ ಸಂಪನ್ಮೂಲಗಳನ್ನು ಬಳಸಿ ನಿಗಮದ ಧಾರವಾಡ, ಕೋಲಾರ, ಶಿವಮೊಗ್ಗ ಮತ್ತು ಚಿಕ್ಕಮಗಳೂರು ವಿಭಾಗಗಳಲ್ಲಿ ಒಂದು ದೀರ್ಘಾವಧಿ ಯೋಜನೆಯನ್ನು ಕೈಗೆತ್ತಿಕೊಂಡಲ್ಲಿ ಮರ ಆಧಾರಿತ ಉದ್ದಿಮೆಗಳ ಬೇಡಿಕೆಯನ್ನು ತಕ್ಕಮಟ್ಟಿಗೆ ಪೂರೈಸುವುದಲ್ಲದೇ, ನಿಗಮವು ಆರ್ಥಿಕವಾಗಿ ಲಾಭಗಳಿಸಿ, ಸದೃಢತೆಯತ್ತ ಮುನ್ನಡೆಯುವ ಸಾಧ್ಯತೆ ಇರುತ್ತದೆ ಎಂದು ಮನಗಂಡು ಮುಂದಿನ 9 ವರ್ಷಗಳಲ್ಲಿ ಅಂದರೆ 2014–15 ರಿಂದ 2022–23ರ ವರೆಗೆ ನಿಗಮದ ಆಂತರಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಒಟ್ಟು 9900 ಹೆ. ವಿಸ್ತೀರ್ಣದಲ್ಲಿ ರೂ. 7383.221 ಲಕ್ಷ ವೆಚ್ಚದಲ್ಲಿ ಪಲ್ಪ್‌ವುಡ್ ನೆಡುತೋಪುಗಳನ್ನು ನಿರ್ಮಾಣ ಮಾಡಲು ದಿನಾಂಕ : 12–06–2013ರಂದು ನಡೆದ ನಿಗಮದ 242ನೇ ಮಂಡಳಿ ಸಭೆಯಲ್ಲಿ ಅನುಮೋದನೆಗೊಂಡಿದ್ದು, ನಿಗಮದ ಮೆಮೋರಾಂಡಂ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನಲ್ಲಿರುವ ನಿಯಮ ಸಂಖ್ಯೆ : 33(1)ರ ಅನುಸಾರ ಸದರಿ ಪ್ರಾಯೋಜನೆಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿಗಾಗಿ ಸಲ್ಲಿಸಿದ್ದಾರೆ.

2. ಮುಂದುವರೆದು, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ಇವರು ತಮ್ಮ ದಿನಾಂಕ : 28–12–2013ರ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ : ಅಪಜೀ 03 ಎಫ್‌ಪಿಸಿ 2013, ದಿನಾಂಕ : 20–02–2013ರಲ್ಲಿ ನಿಗಮವು ಒಟ್ಟು 20,957.44 ಹೆಕ್ಟೇರ್ ಪ್ರದೇಶವನ್ನು ಅರಣ್ಯ ಇಲಾಖೆಗೆ ಹಿಂದಿರುಗಿಸಲು ಆದೇಶವಾಗಿದ್ದು, ಇದರ ಪೈಕಿ ನೆಡುತೋಪುಗಳನ್ನು ಬೆಳೆಸಲು ಯೋಗ್ಯವಲ್ಲದ ಒಟ್ಟು 9,968.10 ಹೆಕ್ಟೇರ್ ಪ್ರದೇಶವನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸಲು ಮೊದಲ ಹಂತದಲ್ಲಿ ಗುರುತಿಸಲಾಗಿದ್ದು. ಈ ಪೈಕಿ 5,615.57 ಹೆಕ್ಟೇರ್ ಪ್ರದೇಶವನ್ನು ಈಗಾಗಲೇ ಹಸ್ತಾಂತರಿಸಲಾಗಿದ್ದು, ಉಳಿದ ಕ್ಷೇತ್ರಗಳನ್ನು ಹಸ್ತಾಂತರಿಸುವ ಕಾರ್ಯವು ಪ್ರಗತಿಯಲ್ಲಿರುತ್ತದೆ ಎಂದು ತಿಳಿಸಿ ಸದರಿ ಪ್ರಸ್ತಾವನೆಗೆ ತಗಲುವ ಪೂರ್ಣ ಮೊತ್ತವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸಲಾಗುವುದೆಂದು ತಿಳಿಸಿ ಪ್ರಸ್ತಾವನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 92 ಎಫ್‌ಪಿಸಿ 2013, ಬೆಂಗಳೂರು, ದಿನಾಂಕ : 05–02–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರು ಶಿವಮೊಗ್ಗ ವಿಭಾಗದಲ್ಲಿ 2014–2020ರ ಅವಧಿಯಲ್ಲಿ ಒಟ್ಟು 9900 ಹೆಕ್ಟೇರ್ ವಿಸ್ತೀರ್ಣದಲ್ಲಿ ರೂ. 7383.221 ಲಕ್ಷ ವೆಚ್ಚದಲ್ಲಿ ಪಲ್ಪ್ ವುಡ್ ನೆಡುತೋಪು ಬೆಳೆಸುವ ಪ್ರಾಯೋಜನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

2. ಸದರಿ ಪ್ರಾಯೋಜನೆಗೆ ತಗಲುವ ವೆಚ್ಚವನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತದ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸತಕ್ಕದ್ದು ಹಾಗೂ ಸರ್ಕಾರಕ್ಕೆ ಅನುದಾನ ಬಿಡುಗಡೆಗೆ ಯಾವುದೇ ಕೋರಿಕೆ ಸಲ್ಲಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಪಿ. ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ವನ್ಯಜೀವಿ ಮತ್ತು ಯೋಜನೆಗಳು).

**P.R. 293**

## ತೋಟಗಾರಿಕಾ ಸಚಿವಾಲಯ

**ವಿಷಯ :** ಮೈಸೂರು ಬಿತ್ತನೆ ವಲಯದ ರೇಷ್ಮೆಗೂಡು ಮಾರುಕಟ್ಟೆ ಕೆಂಪನಹಳ್ಳಿ ಆವರಣದಲ್ಲಿ ಜಾಗವನ್ನು ಶುದ್ಧ ನೀರು ಘಟಕ ಸ್ಥಾಪಿಸಲು ಗ್ರಾಮಪಂಚಾಯತ್ ಕೆಂಪನಹಳ್ಳಿ ಇವರಿಗೆ ನೀಡುವ ಬಗ್ಗೆ.

**ಓದಲಾಗಿದೆ :** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಪತ್ರ ಸಂಖ್ಯೆ : ರೇನಿ/ಪಿಎಸ್/ಕಟ್ಟಡ/1/2/2013-14, ದಿನಾಂಕ : 30-01-2014/05-02-2014.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 30-01-2014/05-02-2014ರ ಪತ್ರದಲ್ಲಿ ಮೈಸೂರು ಬಿತ್ತನೆ ವಲಯದ ರೇಷ್ಮೆಗೂಡು ಮಾರುಕಟ್ಟೆ, ಕೆಂಪನಹಳ್ಳಿ ಆವರಣದಲ್ಲಿ 20'X10' ಜಾಗದಲ್ಲಿ ಗ್ರಾಮ ಪಂಚಾಯತಿ, ಕೆಂಪನಹಳ್ಳಿ ಇವರು ಸಾರ್ವಜನಿಕ ಉಪಯೋಗಕ್ಕಾಗಿ ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸಲು ಅನುಮತಿ ನೀಡಿದಲ್ಲಿ, ಇಲಾಖೆಯ ಕಾರ್ಯ ಚಟುವಟಿಕೆಗಳಿಗೆ ಯಾವುದೇ ರೀತಿಯ ಅಡಚಣೆ ಉಂಟಾಗುವುದಿಲ್ಲವೆಂದು ತಿಳಿಸುತ್ತಾ ಈ ಬಗ್ಗೆ ಅನುಮತಿ ಹಾಗೂ ಆದೇಶವನ್ನು ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಮೈಸೂರು ಬಿತ್ತನೆ ವಲಯದ ರೇಷ್ಮೆಗೂಡು ಮಾರುಕಟ್ಟೆ ಕೆಂಪನಹಳ್ಳಿ ಆವರಣದಲ್ಲಿನ 20'X10' ಜಾಗದಲ್ಲಿ ಗ್ರಾಮ ಪಂಚಾಯತಿ, ಕೆಂಪನಹಳ್ಳಿ ಇವರು ಸಾರ್ವಜನಿಕ ಉಪಯೋಗಕ್ಕಾಗಿ ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸಲು ಅನುಮತಿ ನೀಡಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ತೋಇ 06 ರೇಯೋವಿ 2014, ಬೆಂಗಳೂರು, ದಿನಾಂಕ: 07-03-2014.**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಮೈಸೂರು ಬಿತ್ತನೆ ವಲಯದ ರೇಷ್ಮೆ ಗೂಡು ಮಾರುಕಟ್ಟೆ, ಕೆಂಪನಹಳ್ಳಿ ಆವರಣದಲ್ಲಿನ 20'X10' ಜಾಗದಲ್ಲಿ ಗ್ರಾಮ ಪಂಚಾಯತಿ, ಕೆಂಪನಹಳ್ಳಿ ಇವರು ಸಾರ್ವಜನಿಕ ಉಪಯೋಗಕ್ಕಾಗಿ ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸಲು, ಸದರಿ ಜಮೀನನ್ನು ಉಪಯೋಗಿಸಿಕೊಳ್ಳದಿದ್ದಲ್ಲಿ ರೇಷ್ಮೆ ಇಲಾಖೆಗೆ ಹಿಂದಿರುಗಿಸುವ ಷರತ್ತಿಗೊಳಪಟ್ಟು ಸರ್ಕಾರವು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಉಮಾವತಿ**

ಪೀಠಾಧಿಕಾರಿ (ಪ್ರಭಾರ),
ತೋಟಗಾರಿಕೆ ಇಲಾಖೆ, (ರೇಷ್ಮೆ).

**P.R. 295**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಜಿಲ್ಲಾಧಿಕಾರಿಗಳಿಗೆ ಕೆಲಸದ ಒತ್ತಡವನ್ನು ಕಡಿಮೆ ಮಾಡಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಸಮಿತಿಗಳನ್ನು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿ/ಉಪವಿಭಾಗಾಧಿಕಾರಿಗಳಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ: 05-01-2012 ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಪ್ರಾದೇಶಿಕ ಆಯುಕ್ತರು ಹಾಗೂ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ಸಭೆಯಲ್ಲಿ ತೆಗೆದುಕೊಳ್ಳಲಾದ ನಿರ್ಣಯ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆ.ಸು) ರವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಸಿಆಸುಇ 1 ಗಕಾಸ 2012, ದಿನಾಂಕ : 06-01-2012.
3. ಜಿಲ್ಲಾಧಿಕಾರಿಗಳು, ಧಾರವಾಡ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಆಡಳಿತ/ಸಭೆಗಳು/ ವಹಿ-59/11-12, ದಿನಾಂಕ : 28-01-2012.
4. ಅರೆ ಸರ್ಕಾರಿ ಪತ್ರ ಸಂಖ್ಯೆ : ಸಿಆಸುಇ 7 ಗಕಾಸ 2012, ದಿನಾಂಕ : 03-02-2012.
5. ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಆರ್‌ಇವಿ/ಎಡಿಎಂ/55/2011-12, ದಿನಾಂಕ : 13-02-2012.
6. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ಸಂಖ್ಯೆ : ಜಿಆಶಾ:ಸಿಆರ್/59/11-12, ದಿನಾಂಕ: 17-02-2012.

**ಪ್ರಸ್ತಾವನೆ :**

ದಿನಾಂಕ : 05–01–2012 ರಂದು ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ಸಭೆಯಲ್ಲಿ ಚರ್ಚಿಸಿ ನಿರ್ಣಯಿಸಲಾದಂತೆ ಜಿಲ್ಲಾಧಿಕಾರಿಗಳಿಗೆ ಕೆಲಸದ ಒತ್ತಡವನ್ನು ಕಡಿಮೆ ಮಾಡುವ ಉದ್ದೇಶದಿಂದ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ವಿವಿಧ ಇಲಾಖೆಗಳ ಕೆಲವೊಂದು ಸಮಿತಿಗಳನ್ನು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಅಪರ ಜಿಲ್ಲಾಧಿಕಾರಿಗಳಿಗೆ ಹಸ್ತಾಂತರಿಸಲು ತೀರ್ಮಾನಿಸಲಾದಂತೆ ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ (ಎ.ಟಿ.ಐ.) ಮೈಸೂರು, ಇವರು ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಇಲಾಖೆಗಳ 99 ಸಾಮಾನ್ಯ ಸಮಿತಿಗಳು ಹಾಗೂ ಜಿಲ್ಲೆಗಳಿಗೆ ಸೀಮಿತವಾದ 28 ಸಮಿತಿಗಳ ವಿವರಗಳನ್ನೂ ಸಹ ಕಳುಹಿಸಿರುತ್ತಾರೆ.

ಸಿಆಸುಇ (ಆಡಳಿತ–ಸುಧಾರಣೆ) ಯ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅ.ಸ.ಪತ್ರ ದಿನಾಂಕ : 06–01–2012 ರಲ್ಲಿ ಜಿಲ್ಲಾಧಿಕಾರಿಗಳು ಧಾರವಾಡ ಇವರಿಗೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜರುಗುವ ಸಮಿತಿಗಳನ್ನು ಇತರೆ ಅಧಿಕಾರಿಗಳಿಗೆ ಹಸ್ತಾಂತರಿಸುವ ಬಗ್ಗೆ ಪ್ರಸ್ತಾವನೆಯನ್ನು ಸಿಆಸುಇ (ಆ.ಸು.) ವಿಭಾಗಕ್ಕೆ ಕಳುಹಿಸುವಂತೆ ಕೋರಲಾಗಿತ್ತು.

ಅದರಂತೆ, ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರ ದಿನಾಂಕ : 28–01–2012 ರಂದು ಜಿಲ್ಲಾಧಿಕಾರಿಗಳು ಧಾರವಾಡ ಇವರು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜರುಗುವ ಸಮಿತಿಗಳನ್ನು ಜಿಲ್ಲಾಧಿಕಾರಿಗಳ ಕೆಲಸದ ಒತ್ತಡವನ್ನು ಕಡಿಮೆ ಮಾಡುವ ಸಲುವಾಗಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು/ಅಪರ ಜಿಲ್ಲಾಧಿಕಾರಿಗಳಿಗೆ ಹಸ್ತಾಂತರಿಸಬಹುದಾದ ಪಟ್ಟಿಯನ್ನು ತಯಾರಿಸಿ ಸಿಆಸುಇ (ಆ.ಸು) ವಿಭಾಗಕ್ಕೆ ಸಲ್ಲಿಸಿರುತ್ತಾರೆ.

ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆ.ಸು) ರವರ ಅರೆ ಸರ್ಕಾರಿ ಪತ್ರ ದಿನಾಂಕ: 03–02–2012 ರಲ್ಲಿ ಧಾರವಾಡ ಜಿಲ್ಲೆಯ ಜಿಲ್ಲಾಧಿಕಾರಿಗಳು ಸಲ್ಲಿಸಿದ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳ ಅಭಿಪ್ರಾಯವನ್ನು ಕೋರಲಾಗಿತ್ತು. ಅದರನ್ವಯ ಬಹುತೇಕ ಜಿಲ್ಲೆಯ ಜಿಲ್ಲಾಧಿಕಾರಿಗಳು ತಮ್ಮ ಅಭಿಪ್ರಾಯಗಳನ್ನು ಸಕಾರಾತ್ಮಕವಾಗಿ ನೀಡಿರುತ್ತಾರೆ.

ಈ ಮೇಲಿನ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಜಿಲ್ಲಾಧಿಕಾರಿಗಳ ಒಮ್ಮತಾಭಿಪ್ರಾಯದಂತೆ ಒಟ್ಟಾರೆ 99 ಸಾಮಾನ್ಯ ಸಮಿತಿಗಳಲ್ಲಿ ಕೆಲವು ಸಮಿತಿಗಳನ್ನು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು/ಅಪರ ಜಿಲ್ಲಾಧಿಕಾರಿಗಳಿಗೆ ಹಸ್ತಾಂತರಿಸಲು ನಿರ್ಧರಿಸಿದ್ದು ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಗಕಾಸ 2012, ದಿನಾಂಕ : 20–01–2014.**

ಜಿಲ್ಲಾಧಿಕಾರಿಗಳು ಒಟ್ಟಾರೆ 99 ಸಾಮಾನ್ಯ ಸಮಿತಿಗಳನ್ನು ತಮ್ಮ ಅಧ್ಯಕ್ಷತೆಯಲ್ಲಿ ನಿರ್ವಹಿಸುತ್ತಿದ್ದು, ಅದರಲ್ಲಿ ಅನುಬಂಧ–ಅ ರಲ್ಲಿ ನಮೂದಿಸಿರುವಂತೆ 36 ಸಾಮಾನ್ಯ ಸಮಿತಿಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿಯೇ ಮುಂದುವರೆಸಲು ಅನುಬಂಧ–ಆ ರಲ್ಲಿ ನಮೂದಿಸಿರುವ 24 ಸಾಮಾನ್ಯ ಸಮಿತಿಗಳನ್ನು ಅಪರ ಜಿಲ್ಲಾಧಿಕಾರಿಗಳಿಗೆ ವಹಿಸಲು ಅನುಬಂಧ–ಇ ರಲ್ಲಿ ನಮೂದಿಸಿರುವ 33 ಸಾಮಾನ್ಯ ಸಮಿತಿಗಳನ್ನು ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಹಸ್ತಾಂತರಿಸಲು ಮತ್ತು ಉಳಿದ ಸಮಿತಿಗಳನ್ನು ಜಿಲ್ಲಾಧಿಕಾರಿಗಳ ನಿಯಂತ್ರಣದಲ್ಲಿಯೇ ಉಳಿಸಿಕೊಳ್ಳಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಶಾಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ).

**ಅನುಬಂಧ–ಅ**

**ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಮುಂದುವರೆಯಬಹುದಾದ ಸಮಿತಿಗಳು**

| ಕ್ರ. ಸಂ. | ಸಮಿತಿಗಳ ವಿವರಗಳು | ಇಲಾಖೆ | ಅಧ್ಯಕ್ಷರು |
|---|---|---|---|
| 1 | 2 | 3 | 4 |
| 1. | ಕಂದಾಯ ಅಧಿಕಾರಿಗಳ ಸಭೆ | ಕಂದಾಯ ಇಲಾಖೆ | ಜಿಲ್ಲಾಧಿಕಾರಿ |
| 2. | ಭಾರತದ ಸರ್ವೋಚ್ಚ ನ್ಯಾಯಾಲಯದ ಮಧ್ಯಂತರ ಆದೇಶಾನುಸಾರ ಸಾರ್ವಜನಿಕ ರಸ್ತೆಗಳು, ಉದ್ಯಾನವನಗಳು ಮತ್ತು ಇನ್ನಿತರ ಸಾರ್ವಜನಿಕ ಸ್ಥಳಗಳಲ್ಲಿನ ಒತ್ತುವರಿ ತೆರವುಗೊಳಿಸುವುದು– ಜಿಲ್ಲಾ ಮಟ್ಟದ ಸಮಿತಿ | ಕಂದಾಯ ಇಲಾಖೆ | ಜಿಲ್ಲಾಧಿಕಾರಿ |
| 3. | 3.(ಅ) ಸ್ವಾತಂತ್ರ ದಿನಾಚರಣೆ ಸಮಿತಿ<br>3.(ಆ) ಗಣರಾಜ್ಯೋತ್ಸವ ದಿನಾಚರಣೆ ಸಮಿತಿ<br>3.(ಇ) ಕರ್ನಾಟಕ ರಾಜ್ಯೋತ್ಸವ ಸಮಿತಿ<br>3. (ಈ) ಡಾ॥ ಅಂಬೇಡ್ಕರ್ ಜಯಂತಿ | ಕಂದಾಯ ಇಲಾಖೆ | ಜಿಲ್ಲಾಧಿಕಾರಿ |
| | 3. (ಉ) ಬಾಬು ಜಗಜೀವನರಾಂ ಜಯಂತಿ ಸಮಿತಿ | ಡಿಎಸ್‌ಡಬ್ಲ್ಯೂಓ | ಜಿಲ್ಲಾಧಿಕಾರಿ |
| 4. | ಜಿಲ್ಲಾ 10ನೇ ಹಣಕಾಸು ಆಯೋಗದ ಅನುಷ್ಠಾನ ಸಮಿತಿ | ನಗರಾಭಿವೃದ್ಧಿ ಇಲಾಖೆ | ಜಿಲ್ಲಾಧಿಕಾರಿ |
| 5. | ಜಿಲ್ಲಾ ಶಾಂತಿ ಸಮಿತಿ | ಕಂದಾಯ ಇಲಾಖೆ | ಜಿಲ್ಲಾಧಿಕಾರಿ |

| ಕ್ರ. ಸಂ. | ಸಮಿತಿಗಳ ವಿವರಗಳು | ಇಲಾಖೆ | ಅಧ್ಯಕ್ಷರು |
|---|---|---|---|
| 6. | ಆಹಾರ ಭದ್ರತಾ ಯೋಜನೆಗಳ ಸಮಿತಿಗಳು | ಆಹಾರ ಇಲಾಖೆ | ಜಿಲ್ಲಾಧಿಕಾರಿ |
| 7. | ಆಹಾರ ಸಾಗಾಣಿಕೆ ಟೆಂಡರು ಅನುಮೋದನೆ | ಆಹಾರ ಇಲಾಖೆ | ಜಿಲ್ಲಾಧಿಕಾರಿ |
| 8. | ಪ್ರಧಾನ ಮಂತ್ರಿಯವರ 15 ಅಂಶ ಕಾರ್ಯಕ್ರಮ ಜಿಲ್ಲಾ ಮಟ್ಟದ ಸಮಿತಿ | ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ | ಜಿಲ್ಲಾಧಿಕಾರಿ |
| 9. | ಜಿಲ್ಲಾ ಮಟ್ಟದ ಹಿತರಕ್ಷಣಾ ಸಮಿತಿ | ಡಿಎಸ್‌ಡಬ್ಲ್ಯು ಓ | ಜಿಲ್ಲಾಧಿಕಾರಿ |
| 10. | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಭೂಮಿ ಖರೀದಿ ಸಮಿತಿ | ಡಾ॥ ಅಂಬೇಡ್ಕರ್ ನಿಗಮ | ಜಿಲ್ಲಾಧಿಕಾರಿ |
| 11. | ಕನ್ನಡ ಅನುಷ್ಠಾನ ಜಿಲ್ಲಾ ಮಟ್ಟದ ಸಮಿತಿ | ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಜಿಲ್ಲಾಧಿಕಾರಿ |
| 12. | ಡಿಐಸಿ ಏಕ ಗವಾಕ್ಷಿ | ವಾಣಿಜ್ಯ ಮತ್ತು ಕೈಗಾರಿಕೆ | ಜಿಲ್ಲಾಧಿಕಾರಿ |
| 13. | ಪಿಎಂಆರ್‌ವೈ ಸಮಿತಿ | ವಾಣಿಜ್ಯ ಮತ್ತು ಕೈಗಾರಿಕೆ | ಜಿಲ್ಲಾಧಿಕಾರಿ |
| 14. | ಜಿಲ್ಲಾ ಕೃಷಿ ವಿಮೆ ಸಮಿತಿ | ಕೃಷಿ ಇಲಾಖೆ | ಜಿಲ್ಲಾಧಿಕಾರಿ |
| 15. | ಮರಳು ಗಣಿಗಾರಿಕೆ ಮತ್ತು ಸಾಗಣೆ ನಿಯಂತ್ರಣ ಸಮಿತಿ | ಹಿರಿಯ ಜಿಯಾಲಜಿಸ್ಟ್ | ಜಿಲ್ಲಾಧಿಕಾರಿ |
| 16. | ಅರಣ್ಯ ಭೂಮಿ ಒತ್ತುವರಿ ತೆರವು ಸಮಿತಿ | ಅರಣ್ಯ ಇಲಾಖೆ | ಜಿಲ್ಲಾಧಿಕಾರಿ |
| 17. | ರಸ್ತೆ ಸಾರಿಗೆ ಪ್ರಾಧಿಕಾರ | ಪ್ರಾದೇಶಿಕ ಸಾರಿಗೆ ಅಧಿಕಾರಿ | ಜಿಲ್ಲಾಧಿಕಾರಿ |
| 18. | ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ | ಪ್ರವಾಸೋದ್ಯಮ ಇಲಾಖೆ | ಜಿಲ್ಲಾಧಿಕಾರಿ |
| 19. | ಜಿಲ್ಲಾ ಜನನ ಮತ್ತು ಮರಣಗಳ ನೋಂದಣಿ ಸಮನ್ವಯ ಸಮಿತಿ | ಸಾಂಖ್ಯಿಕ ಇಲಾಖೆ | ಜಿಲ್ಲಾಧಿಕಾರಿ |
| 20. | ಜಿಲ್ಲಾ ಸೈನಿಕ ಕಲ್ಯಾಣ ಸಮಿತಿ | ಸೈನಿಕ ಕಲ್ಯಾಣ | ಜಿಲ್ಲಾಧಿಕಾರಿ |
| 21. | ಜಿಲ್ಲಾ ಕೇಂದ್ರ ಕಾರಾಗೃಹ ಸಲಹಾ ಸಮಿತಿ | ಬಂಧೀಖಾನೆ | ಜಿಲ್ಲಾಧಿಕಾರಿ |
| 22. | ಮಲ್ಪೆ ಅಭಿವೃದ್ಧಿ ಪ್ರಾಧಿಕಾರ | ಆಯುಕ್ತರು, ಸಿಎಂಸಿ, ಉಡುಪಿ | ಜಿಲ್ಲಾಧಿಕಾರಿ |
| 23. | ಘನತ್ಯಾಜ್ಯ ನಿರ್ವಹಣಾ ಜಿಲ್ಲಾ ಮಟ್ಟದ ಸಮಿತಿ | ಪಿಡಿ, ಯು.ಡಿ. ಕೋಶ | ಜಿಲ್ಲಾಧಿಕಾರಿ |
| 24. | ಜಿಲ್ಲಾ ಆರೋಗ್ಯ ಅಭಿಯಾನ | ಜಿಲ್ಲಾ ವೈದ್ಯಾಧಿಕಾರಿ | ಜಿಲ್ಲಾಧಿಕಾರಿ |
| 25. | ಜಿಲ್ಲಾ ಮಟ್ಟದ ತಾಯಿ ಮರಣ ತಪಾಸಣಾ/ವಿಚಾರಣಾ ಸಮಿತಿ | ಜಿಲ್ಲಾ ವೈದ್ಯಾಧಿಕಾರಿ | ಜಿಲ್ಲಾಧಿಕಾರಿ |
| 26. | ಕುಟುಂಬ ದೌರ್ಜನ್ಯದಿಂದ ಮಹಿಳೆಯರನ್ನು ರಕ್ಷಿಸುವ ಸಮಿತಿ | ಉಪ ನಿರ್ದೇಶಕರು, ಮ. ಮತ್ತು ಮ.ಕ. ಇಲಾಖೆ | ಜಿಲ್ಲಾಧಿಕಾರಿ |
| 27. | ಅಕ್ರಮವಾಗಿ ಅಫೀಮು ಮತ್ತು ಗಾಂಜಾ ಬೆಳೆಯುವುದನ್ನು ಪತ್ತೆ ಹಚ್ಚಿ ನಾಶಪಡಿಸಲು ರಚಿಸಿದ ಸಮಿತಿ ಸಭೆ | ಅಬಕಾರಿ ಇಲಾಖೆ | ಜಿಲ್ಲಾಧಿಕಾರಿ |
| 28. | ಪರಿಶಿಷ್ಟ ಜಾತಿ ಕಾಲೋನಿಗಳಿಗೆ ಮೂಲಸೌಕರ್ಯ ಒದಗಿಸುವ ಕಾರ್ಯ ಅನುಷ್ಠಾನ ಸಮಿತಿ | ಸಮಾಜ ಕಲ್ಯಾಣ ಇಲಾಖೆ | ಜಿಲ್ಲಾಧಿಕಾರಿ |
| 29. | ಜಿಲ್ಲಾ ಬಾಲ ಕಾರ್ಮಿಕ ಯೋಜನಾ ಸಂಘ ಕಾರ್ಯಕಾರಿ ಸಲಹಾ ಸಮಿತಿ | ಜಿಲ್ಲಾ ಕಾರ್ಮಿಕ ಅಧಿಕಾರಿ | ಜಿಲ್ಲಾಧಿಕಾರಿ |
| 30. | ಅಕ್ರಮ ಅಬಕಾರಿ ಚಟುವಟಿಗಳನ್ನು ನಿಯಂತ್ರಿಸಲು ತನಿಖಾ ಸಮಿತಿ | ಜಿಲ್ಲಾ ಅಬಕಾರಿ ಆಯುಕ್ತರು | ಜಿಲ್ಲಾಧಿಕಾರಿ |
| 31. | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯ ತ್ವರಿತ ಮೇವು ಅಭಿವೃದ್ಧಿ ಕಾರ್ಯಕ್ರಮದಡಿಯಲ್ಲಿ ಫಲಾನುಭವಿಗಳ ಆಯ್ಕೆ ಸಮಿತಿ | ಪಶು ವೈದ್ಯಕೀಯ ಮತ್ತು ಪಶುಪಾಲನೆ ಇಲಾಖೆ | ಜಿಲ್ಲಾಧಿಕಾರಿ |
| 32. | ನಿರ್ಮಿತಿ ಕೇಂದ್ರ ಆಡಳಿತ ಮಂಡಳಿ ಸಭೆ | ಯೋಜನಾ ನಿರ್ದೇಶಕರು, ನಿರ್ಮಿತಿ ಕೇಂದ್ರ | ಜಿಲ್ಲಾಧಿಕಾರಿ |
| 33. | ರೆಡ್ ಕ್ರಾಸ್ ಸಮಿತಿ | ಕಂದಾಯ ಇಲಾಖೆ | ಜಿಲ್ಲಾಧಿಕಾರಿ |
| 34. | ಜಿಲ್ಲಾ ಮಟ್ಟದ ಸಮನ್ವಯ ಸಮಿತಿ | ಕಂದಾಯ ಇಲಾಖೆ | ಜಿಲ್ಲಾಧಿಕಾರಿ |
| 35. | ಅಬಕಾರಿ ಅಕ್ರಮಗಳನ್ನು ತಡೆಗಟ್ಟಲು ಪರಿಶೀಲನಾ ಸಮಿತಿ | ಒಳಾಡಳಿತ ಇಲಾಖೆ | ಜಿಲ್ಲಾಧಿಕಾರಿ |
| 36. | ಜಾತಿ ಸಿಂಧುತ್ವ ಸಮಿತಿ | ಡಿಓಬಿಸಿಎಂ | ಜಿಲ್ಲಾಧಿಕಾರಿ |

## ಅನುಬಂಧ–ಆ

### ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಕೆಲವು ಸಮಿತಿಗಳಲ್ಲಿ ಅಪರ ಜಿಲ್ಲಾಧಿಕಾರಿಗಳಿಗೆ ವಹಿಸಬಹುದಾದ ಸಮಿತಿಗಳು

| ಕ್ರ. ಸಂ. | ಸಮಿತಿಗಳ ವಿವರಗಳು | ಇಲಾಖೆ | ಅಧ್ಯಕ್ಷರು |
|---|---|---|---|
| 1 | 2 | 3 | 4 |
| 1. | ಜಿಲ್ಲಾ ಮಟ್ಟದ ಐಡಿಎಸ್ಎಂಟಿ ಸಮಿತಿ | ನಗರಾಭಿವೃದ್ಧಿ ಇಲಾಖೆ | ಅಪರ ಜಿಲ್ಲಾಧಿಕಾರಿ |
| 2. | ಜಿಲ್ಲಾ ಮಟ್ಟದ ಎಸ್‌ಜೆಎಸ್‌ಆರ್‌ವೈ | ನಗರಾಭಿವೃದ್ಧಿ ಇಲಾಖೆ | ಅಪರ ಜಿಲ್ಲಾಧಿಕಾರಿ |
| 3. | ಜಿಲ್ಲಾ ಪುನರ್ವಸತಿ ಸಮಿತಿ | ಕಂದಾಯ ಇಲಾಖೆ | ಅಪರ ಜಿಲ್ಲಾಧಿಕಾರಿ |
| 4. | ಜಿಲ್ಲಾ ಜಾಗೃತ ಮತ್ತು ಮೇಲ್ವಿಚಾರಣಾ ಸಮಿತಿ | ಕಂದಾಯ ಇಲಾಖೆ | ಅಪರ ಜಿಲ್ಲಾಧಿಕಾರಿ |
| 5. | ನಗರಾಭಿವೃದ್ಧಿ ಪ್ರಾಧಿಕಾರ | ನಗರಾಭಿವೃದ್ಧಿ ಇಲಾಖೆ | ಅಪರ ಜಿಲ್ಲಾಧಿಕಾರಿ |
| 6. | ನಿರ್ಮಲ ನಗರ ಯೋಜನೆ | ನಗರಾಭಿವೃದ್ಧಿ ಇಲಾಖೆ | ಅಪರ ಜಿಲ್ಲಾಧಿಕಾರಿ |
| 7. | ನಗರ ಸ್ಥಳೀಯ ಸಂಸ್ಥೆಗಳ ಸಮಿತಿ | ನಗರಾಭಿವೃದ್ಧಿ ಇಲಾಖೆ | ಅಪರ ಜಿಲ್ಲಾಧಿಕಾರಿ |
| 8. | ಗ್ರಾಹಕರ ದಿನಾಚರಣೆ ಸಮಿತಿ | ಆಹಾರ ಇಲಾಖೆ | ಅಪರ ಜಿಲ್ಲಾಧಿಕಾರಿ |
| 9. | ಅವೈಜ್ಞಾನಿಕ ಇಂಧನ ಸಂಪನ್ಮೂಲಗಳ ಜಿಲ್ಲಾ ಮಟ್ಟದ ಸಲಹಾ ಸಮಿತಿ | ಇಂಧನ ಇಲಾಖೆ | ಅಪರ ಜಿಲ್ಲಾಧಿಕಾರಿ |
| 10. | ಜಿಲ್ಲಾ ಆರೋಗ್ಯ ಸಮಿತಿ | ಆರೋಗ್ಯ ಇಲಾಖೆ | ಅಪರ ಜಿಲ್ಲಾಧಿಕಾರಿ |
| 11. | ಜಿಲ್ಲಾ ಏಡ್ಸ್ ನಿಯಂತ್ರಣ ಕಾರ್ಯಕ್ರಮ | ಆರೋಗ್ಯ ಇಲಾಖೆ | ಅಪರ ಜಿಲ್ಲಾಧಿಕಾರಿ |
| 12. | ಅಲೇಮಾರಿ ಜನಾಂಗದ ಕಾಲೋನಿಗಳಿಗೆ ಅವಶ್ಯಕ ಸೌಕರ್ಯ ಒದಗಿಸುವ ಜಿಲ್ಲಾ ಮಟ್ಟದ ಸಮಿತಿ | ಡಿಓಬಿಸಿಎಂ | ಅಪರ ಜಿಲ್ಲಾಧಿಕಾರಿ |
| 13. | ಮಹಿಳೆಯರಿಗಾಗಿ ಸ್ವಾಗತ ಕೇಂದ್ರ ಸಮಿತಿ | ಡಿಓಬಿಸಿಎಂ | ಅಪರ ಜಿಲ್ಲಾಧಿಕಾರಿ |
| 14. | ವಿಶ್ವ ವಿಕಲಚೇತನರ ದಿನಾಚರಣೆ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಅಪರ ಜಿಲ್ಲಾಧಿಕಾರಿ |
| 15. | ಬಾಲಕಾರ್ಮಿಕ ಸಮಿತಿ | ಕಾರ್ಮಿಕ ಇಲಾಖೆ | ಅಪರ ಜಿಲ್ಲಾಧಿಕಾರಿ |
| 16. | ಜೀತದಾಳು ಕಾರ್ಮಿಕ ಅಧಿನಿಯಮ ಸಮಿತಿ | ಕಾರ್ಮಿಕ ಇಲಾಖೆ | ಅಪರ ಜಿಲ್ಲಾಧಿಕಾರಿ |
| 17. | ಬಸವ ಜಯಂತಿ ಸಮಿತಿ | ಕನ್ನಡ ಮತ್ತು ಸಂಸ್ಕೃತಿ | ಅಪರ ಜಿಲ್ಲಾಧಿಕಾರಿ |
| 18. | ಮಹಾವೀರ ಜಯಂತಿ | ಕನ್ನಡ ಮತ್ತು ಸಂಸ್ಕೃತಿ | ಅಪರ ಜಿಲ್ಲಾಧಿಕಾರಿ |
| 19. | ಕನಕ ಜಯಂತಿ ಸಮಿತಿ | ಕನ್ನಡ ಮತ್ತು ಸಂಸ್ಕೃತಿ | ಅಪರ ಜಿಲ್ಲಾಧಿಕಾರಿ |
| 20. | ಜಿಲ್ಲಾ ಕ್ರೀಡಾಂಗಣ ನಿರ್ವಹಣಾ ಸಮಿತಿ | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ | ಅಪರ ಜಿಲ್ಲಾಧಿಕಾರಿ |
| 21. | ರಸ್ತೆ ಸುರಕ್ಷತೆ ಸಮಿತಿ | ಸಾರಿಗೆ ಇಲಾಖೆ | ಅಪರ ಜಿಲ್ಲಾಧಿಕಾರಿ |
| 22. | ಜಿಲ್ಲಾ ಮಟ್ಟದ ಕೃಷಿ ಸಾಂಖ್ಯಿಕ ಸಮನ್ವಯ ಸಮಿತಿ | ಸಾಂಖ್ಯಿಕ ಇಲಾಖೆ | ಅಪರ ಜಿಲ್ಲಾಧಿಕಾರಿ |
| 23. | ಜಿಲ್ಲಾ ಆರೋಗ್ಯ ರಕ್ಷಾ ಸಮಿತಿ | ಜಿಲ್ಲಾ ಸರ್ಜನ್ | ಅಪರ ಜಿಲ್ಲಾಧಿಕಾರಿ |
| 24. | ಬಾಲಾಪರಾಧ ಮಂಡಳಿ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಅಪರ ಜಿಲ್ಲಾಧಿಕಾರಿ |

## ಅನುಬಂಧ–ಇ

### ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೆಲವು ಸಮಿತಿಗಳಲ್ಲಿ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ವಹಿಸಬಹುದಾದ ಸಮಿತಿಗಳು

| ಕ್ರ. ಸಂ. | ಸಮಿತಿಗಳ ವಿವರಗಳು | ಇಲಾಖೆ | ಅಧ್ಯಕ್ಷರು |
|---|---|---|---|
| 1 | 2 | 3 | 4 |
| 1. | ಮೊರಾರ್ಜಿ ದೇಶಾಯಿ ವಸತಿ ಶಾಲೆ/ಕಾಲೇಜು ಸಮಿತಿ | ಡಿಓಬಿಸಿಎಂ | ಜಿ.ಪಂ.ಮು.ಕಾ. ಅಧಿಕಾರಿಗಳು |

| ಕ್ರ. ಸಂ. | ಸಮಿತಿಗಳ ವಿವರಗಳು | ಇಲಾಖೆ | ಅಧ್ಯಕ್ಷರು |
|---|---|---|---|
| 2. | ಅಲ್ಪಸಂಖ್ಯಾತರ ಕಾನೂನು ಪದವೀಧರರುಗಳ ಆಯ್ಕೆ ಸಮಿತಿ | ಡಿಓಬಿಸಿಎಂ | ಜಿ.ಪಂ.ಮು.ಕಾ. ಅಧಿಕಾರಿಗಳು |
| 3. | ಡಿ. ದೇವರಾಜು ಅರಸ್ ಜಯಂತಿ ಸಮಿತಿ | ಡಿಓಬಿಸಿಎಂ | ಜಿ.ಪಂ.ಮು.ಕಾ. ಅಧಿಕಾರಿಗಳು |
| 4. | ಡಿಓಬಿಸಿಎಂ ವಿದ್ಯಾರ್ಥಿಗಳನ್ನು ಶಿಕ್ಷಣಕ್ಕೆ ಪ್ರೇರೇಪಿಸಲು ವಿದ್ಯಾರ್ಥಿವೇತನ ಮಂಜೂರು ಮಾಡುವ ಸಮಿತಿ | ಡಿಓಬಿಸಿಎಂ | ಜಿ.ಪಂ.ಮು.ಕಾ. ಅಧಿಕಾರಿಗಳು |
| 5. | ಅಲ್ಪಸಂಖ್ಯಾತರ ಶಾಲೆಗಳಿಗೆ ಶಿಕ್ಷಣ ಸಾಮಗ್ರಿಗಳನ್ನು ಪೂರೈಸುವ ಸಮಿತಿ | ಡಿಓಬಿಸಿಎಂ | ಜಿ.ಪಂ.ಮು.ಕಾ. ಅಧಿಕಾರಿಗಳು |
| 6. | ಕೌಶಲ್ಯ ಯೋಜನೆ–ಅಲ್ಪಸಂಖ್ಯಾತ ವಿದ್ಯಾರ್ಥಿಗಳ ಕಂಪ್ಯೂಟರ್ ತರಬೇತಿಗೆ ಆಯ್ಕೆ ಸಮಿತಿ | ಡಿಓಬಿಸಿಎಂ | ಜಿ.ಪಂ.ಮು.ಕಾ. ಅಧಿಕಾರಿಗಳು |
| 7. | ಮಹಿಳಾ ಕಾನೂನು ಪದವೀಧರರ ಧನಸಹಾಯ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 8. | ವಿಕಲಚೇತನರ ಆಧಾರ ಯೋಜನೆ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 9. | ಸ್ತ್ರೀ ಶಕ್ತಿ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 10. | ಸಾಂತ್ವನ ಕಾರ್ಯಕ್ರಮ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 11. | ಮಹಿಳಾ ಮತ್ತು ಮಕ್ಕಳ ಅಕ್ರಮ ಸಾಗಾಣಿಕೆ ತಡೆ–ಜಿಲ್ಲಾ ಮಟ್ಟದ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 12. | ಜಿಲ್ಲಾ ಮಟ್ಟದ ಗ್ರಾಮೀಣ ಅಂಗವೈಕಲ್ಯ ಜನರ ಪುನರ್ವಸತಿ ಕಾರ್ಯಕ್ರಮ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 13. | ಪಾಲಕರ ಪೋಷಣೆ, ಸಂರಕ್ಷಣೆ ಹಾಗೂ ಹಿರಿಯ ನಾಗರಿಕರ ರಕ್ಷಣೆ ಕಾಯ್ದೆ 2007 (ಕೇಂದ್ರ ಶಾಸನ 2007ರ ನಿಯಮ 56) ಅನುಷ್ಠಾನಕ್ಕಾಗಿ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 14. | ರಾಷ್ಟ್ರೀಯ ಟ್ರಸ್ಟ್ ಅಧಿನಿಯಮ–ಸ್ಥಳೀಯ ಮಟ್ಟದ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 15. | ವರದಕ್ಷಿಣೆ ನಿರ್ಮೂಲನಾ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 16. | ರಿಮ್ಯಾಂಡ್ ಹೋಮ್ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 17. | ಜಿಲ್ಲಾ ಗ್ರಂಥಾಲಯ ಸಮಿತಿ | ಗ್ರಂಥಾಲಯ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 18. | ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿ | ಡಿಡಿಪಿಐ | ಜಿ.ಪಂ.ಮು.ಕಾ. ಅಧಿಕಾರಿಗಳು |
| 19. | ಎಸ್ಎಸ್ಎಲ್ಸಿ ಪರೀಕ್ಷಾ ಸಮಿತಿ | ಡಿಡಿಪಿಐ | ಜಿ.ಪಂ.ಮು.ಕಾ. ಅಧಿಕಾರಿಗಳು |
| 20. | ಪದವಿಪೂರ್ವ ಪರೀಕ್ಷಾ ಸಮಿತಿ | ಡಿಡಿಪಿಐ | ಜಿ.ಪಂ.ಮು.ಕಾ. ಅಧಿಕಾರಿಗಳು |
| 21. | ಜಿಲ್ಲಾ ವಾಯು ಮಾಲಿನ್ಯ ನಿಯಂತ್ರಣ ಸಮಿತಿ | ಪರಿಸರ ಇಲಾಖೆ | ಜಿ.ಪಂ.ಮು.ಕಾ. ಅಧಿಕಾರಿಗಳು |
| 22. | ಜಿಲ್ಲಾ ಮಟ್ಟದ ಖಾಸಗಿ ವೈದ್ಯಕೀಯ ಸಂಸ್ಥೆಗಳ ನೋಂದಣಿ ಪ್ರಾಧಿಕಾರ | ಜಿಲ್ಲಾ ವೈದ್ಯಾಧಿಕಾರಿ | ಜಿ.ಪಂ.ಮು.ಕಾ. ಅಧಿಕಾರಿಗಳು |
| 23. | ಜಿಲ್ಲಾ ಮಟ್ಟದ ಕುಟುಂಬ ಯೋಜನೆ ಗುಣ ನಿಯಂತ್ರಣ ನಿಶ್ಚಿತತೆ ಸಮಿತಿ | ಜಿಲ್ಲಾ ವೈದ್ಯಾಧಿಕಾರಿ | ಜಿ.ಪಂ.ಮು.ಕಾ. ಅಧಿಕಾರಿಗಳು |

| ಕ್ರ. ಸಂ. | ಸಮಿತಿಗಳ ವಿವರಗಳು | ಇಲಾಖೆ | ಅಧ್ಯಕ್ಷರು |
|---|---|---|---|
| 24. | ಜಿಲ್ಲಾ ಶಿಶು ಮರಣ ವಿಚಾರಣಾ ಸಮಿತಿ | ಜಿಲ್ಲಾ ವೈದ್ಯಾಧಿಕಾರಿ | ಜಿ.ಪಂ.ಮು.ಕಾ. ಅಧಿಕಾರಿಗಳು |
| 25. | ಜಿಲ್ಲಾ ಮಲೇರಿಯಾ ಸಮಿತಿ | ಜಿಲ್ಲಾ ವೈದ್ಯಾಧಿಕಾರಿ | ಜಿ.ಪಂ.ಮು.ಕಾ. ಅಧಿಕಾರಿಗಳು |
| 26. | ಸ್ವಇಚ್ಛಾ ರಕ್ತದಾನ ಮತ್ತು ರಕ್ತ ಸುರಕ್ಷತೆಯ ಜಿಲ್ಲಾ ಟಾಸ್ಕ್ ಫೋರ್ಸ್ | ಜಿಲ್ಲಾ ಕಾರ್ಯಕ್ರಮ ಅಧಿಕಾರಿ, ಜಿಲ್ಲಾ ಏಡ್ಸ್ ನಿಯಂತ್ರಣ ಘಟಕ | ಜಿ.ಪಂ.ಮು.ಕಾ. ಅಧಿಕಾರಿಗಳು |
| 27. | ಕ್ಷಯ/ಹೆಚ್‌ಐವಿ ಸಮನ್ವಯ ಸಮಿತಿ | ಜಿಲ್ಲಾ ಕಾರ್ಯಕ್ರಮ ಅಧಿಕಾರಿ, ಜಿಲ್ಲಾ ಏಡ್ಸ್ ನಿಯಂತ್ರಣ ಘಟಕ | ಜಿ.ಪಂ.ಮು.ಕಾ. ಅಧಿಕಾರಿಗಳು |
| 28. | ಜಿಲ್ಲಾ ಹೆಚ್‌ಐವಿ/ಏಡ್ಸ್ ತಡೆ ಹಾಗೂ ನಿಯಂತ್ರಣ ಸಮಿತಿ | ಜಿಲ್ಲಾ ಕಾರ್ಯಕ್ರಮ ಅಧಿಕಾರಿ, ಜಿಲ್ಲಾ ಏಡ್ಸ್ ನಿಯಂತ್ರಣ ಘಟಕ | ಜಿ.ಪಂ.ಮು.ಕಾ. ಅಧಿಕಾರಿಗಳು |
| 29. | ಜಿಲ್ಲಾ ಪಲ್ಸ್ ಪೋಲಿಯೋ ಜಿಲ್ಲಾ ಮಟ್ಟದ ಸಮನ್ವಯ ಸಮಿತಿ | ಜಿಲ್ಲಾ ಕಾರ್ಯಕ್ರಮ ಅಧಿಕಾರಿ, ಜಿಲ್ಲಾ ಏಡ್ಸ್ ನಿಯಂತ್ರಣ ಘಟಕ | ಜಿ.ಪಂ.ಮು.ಕಾ. ಅಧಿಕಾರಿಗಳು |
| 30. | ಆಶಾ ರಿಸೋರ್ಸ್ ಕೇಂದ್ರ ಸಲಹಾ ಸಮಿತಿ | ಜಿಲ್ಲಾ ವೈದ್ಯಾಧಿಕಾರಿ | ಜಿ.ಪಂ.ಮು.ಕಾ. ಅಧಿಕಾರಿಗಳು |
| 31. | ಕೋಟಿ ಚೆನ್ನಯ್ಯ ಥೀಮ್ ಉದ್ಯಾನವನ ಸಮಿತಿ | ಕನ್ನಡ ಮತ್ತು ಸಂಸ್ಕೃತಿ | ಜಿ.ಪಂ.ಮು.ಕಾ. ಅಧಿಕಾರಿಗಳು |
| 32. | ಅಸಾಧಾರಣ ಪ್ರತಿಭಾ ಪ್ರಶಸ್ತಿ ಆಯ್ಕೆ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ | ಜಿ.ಪಂ.ಮು.ಕಾ. ಅಧಿಕಾರಿಗಳು |
| 33. | ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮದ ಜಿಲ್ಲಾ ಉಸ್ತುವಾರಿ ಸಮಿತಿ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ–ಜಿಲ್ಲಾ ನಿರೂಪಣಾಧಿಕಾರಿ | ಜಿ.ಪಂ.ಮು.ಕಾ. ಅಧಿಕಾರಿಗಳು |

**ಎಂ.ವಿ. ಶಾಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ).

**P.R. 301**
**SC - 1000**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಸಿಆಸುಇ 46 ಎಸ್‌ಎಂಆರ್ 2013, ಬೆಂಗಳೂರು, ದಿನಾಂಕ : 04–01–2014.**

**ವಿಷಯ :** ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಸದಸ್ಯರಿಗೆ ನಗದು ರಹಿತ ವೈದ್ಯಕೀಯ ಚಿಕಿತ್ಸೆ ಕಲ್ಪಿಸುವ ಯೋಜನೆಗೆ ಸರ್ಕಾರಿ ನೌಕರರು ಹಾಗೂ ಅವರ ಕುಟುಂಬದ ಸದಸ್ಯರ ಮಾಹಿತಿಯನ್ನು ಹೆಚ್.ಆರ್.ಎಂ.ಎಸ್.ನಲ್ಲಿ ಜೋಡಿಸಲು ಭಾವಚಿತ್ರ ಸಹಿತ ಮಾಹಿತಿಯನ್ನು ವೇತನ ಬಟವಾಡೆ ಅಧಿಕಾರಿಗಳಿಗೆ ನೀಡುವ ಕುರಿತು ಸೂಚನೆಗಳು.

**ಓದಲಾಗಿದೆ :**
1. ಕಡತ ಸಂಖ್ಯೆ : ಸಿಆಸುಇ 14 ಎಸ್‌ಎಂಆರ್ 2013.
2. ದಿನಾಂಕ : 09–07–2013 ರಂದು ಹಾಗೂ 28–08–2013ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) ಇವರ ದಿನಾಂಕ : 13–08–2013ರ ಅ.ಸ. ಪತ್ರ.

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963 ರಡಿಯಲ್ಲಿ ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಸದಸ್ಯರಿಗೆ ನಗದು ರಹಿತ ವೈದ್ಯಕೀಯ ಚಿಕಿತ್ಸೆ ನೀಡಲು 6ನೇ ವೇತನ ಆಯೋಗದ ಶಿಫಾರಸ್ಸಿನಂತೆ ಹಾಗೂ ಜಂಟಿ ಸಮಾಲೋಚನಾ ಸಮಿತಿ ಸಭೆಯಲ್ಲಿ ಕೈಗೊಂಡ ನಿರ್ಣಯದಂತೆ **"ಜ್ಯೋತಿ ಸಂಜೀವಿನಿ"** ಯೋಜನೆಯನ್ನು ಜಾರಿಗೊಳಿಸಲು ನಿರ್ಧರಿಸಲಾಗಿದೆ. ಇದರನ್ವಯ ಟರ್ಷಿಯರಿ ಸ್ವರೂಪದ 7 ಕಾಯಿಲೆಗಳಿಗೆ ಗುರುತಿಸಲಾಗಿರುವ 447 ಚಿಕಿತ್ಸಾ ವಿಧಾನಗಳನ್ನು ರಾಜ್ಯ ಸರ್ಕಾರದ ಸಂಸ್ಥೆಯಾದ **"ಸುವರ್ಣ ಆರೋಗ್ಯ ಸುರಕ್ಷ ಟ್ರಸ್ಟ್"** ಸಂಸ್ಥೆಯ ಮೂಲಕ 147 ನೆಟ್‌ವರ್ಕ್ ಆಸ್ಪತ್ರೆಗಳಲ್ಲಿ ನಗದು ರಹಿತವಾಗಿ ಚಿಕಿತ್ಸೆಯನ್ನು ಪಡೆಯಲು ಅವಕಾಶ ಕಲ್ಪಿಸಲಾಗುವುದು.

**"ಜ್ಯೋತಿ ಸಂಜೀವಿನಿ"** ಯೋಜನೆಯ ಸೌಲಭ್ಯವನ್ನು ಪಡೆಯಲು ರಾಜ್ಯ ಸರ್ಕಾರಿ ನೌಕರರು ಹಾಗೂ ಕುಟುಂಬದ ಸದಸ್ಯರಿಗೆ ಗುರುತಿನ ಚೀಟಿ ನೀಡುವ ಅಗತ್ಯವಿದ್ದು, ಇದಕ್ಕಾಗಿ **"ಆಧಾರ್"** ಕಾರ್ಡ್‌ಗಳನ್ನು ಗುರುತಿನ ಚೀಟಿಯಾಗಿ ಪರಿಗಣಿಸುವಂತೆ ತೀರ್ಮಾನವನ್ನು ಕೈಗೊಳ್ಳಲಾಗಿರುತ್ತದೆ. **"ಆಧಾರ್"** ಕಾರ್ಡ್ ಹೊಂದಿಲ್ಲದೆ ಇರುವ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಸದಸ್ಯರ ಭಾವಚಿತ್ರ ಮತ್ತು ಇತರ ವಿವರಗಳನ್ನು ಹೆಚ್.ಆರ್.ಎಂ.ಎಸ್. ನಲ್ಲಿ ಅಳವಡಿಸಿ ಅದನ್ನು ಗುರುತಿನ ಚೀಟಿಯನ್ನಾಗಿ ಬಳಸಿಕೊಳ್ಳಲು ತೀರ್ಮಾನಿಸಲಾಗಿದೆ. ಇದಕ್ಕಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು (ಇ–ಆಡಳಿತ) ಹೆಚ್.ಆರ್.ಎಂ.ಎಸ್. ನಲ್ಲಿ ಸರ್ಕಾರಿ ನೌಕರರ **"ಕುಟುಂಬ ಮತ್ತು ಅವಲಂಭಿತರ"** ವಿವರಗಳನ್ನು ಅಳವಡಿಸಲು ಅವಕಾಶ ಮಾಡಲಾಗಿರುತ್ತದೆ ಎಂದು ತಿಳಿಸಿದೆ.

ಈ ಹಿನ್ನೆಲೆಯಲ್ಲಿ ಎಲ್ಲಾ ವೇತನ ಬಟವಾಡೆ ಅಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ರಾಜ್ಯ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963ರ ನಿಯಮ–2ರಂತೆ **"ಕುಟುಂಬ"** ಪದದ ವ್ಯಾಖ್ಯಾನದಡಿಯಲ್ಲಿ ಬರುವ ಸರ್ಕಾರಿ ನೌಕರರ ಹಾಗೂ ಕುಟುಂಬ ಸದಸ್ಯರ ಭಾವಚಿತ್ರ ಹಾಗೂ ಇತರೆ ವಿವರಗಳನ್ನು ಪಡೆದುಕೊಂಡು ಇ–ಆಡಳಿತ ಇಲಾಖೆಯು ನಿಗದಿಪಡಿಸಿರುವ ಹೆಚ್.ಆರ್.ಎಂ.ಎಸ್.ನ ಡಾಟಾಬೇಸ್‌ನಲ್ಲಿ ಅಳವಡಿಸಲು ಕ್ರಮ ವಹಿಸುವಂತೆ ಸೂಚಿಸಲಾಗಿದೆ. ಈ ಕಾರ್ಯವನ್ನು ದಿನಾಂಕ : 31–01–2014ರೊಳಗೆ ಪೂರ್ಣಗೊಳಿಸುವಂತೆ ಸೂಚಿಸಲಾಗಿದೆ.

**"ಆಧಾರ್"** ಕಾರ್ಡ್ ಹೊಂದಿರುವ ಸರ್ಕಾರಿ ನೌಕರರು ಮತ್ತು ಅವರ ಕುಟುಂಬ ಸದಸ್ಯರ ಯು.ಐ.ಡಿ. ಸಂಖ್ಯೆಯನ್ನು ಆಧರಿಸಿ ಅದರಲ್ಲಿನ ವಿವರಗಳನ್ನು ಹೆಚ್.ಆರ್.ಎಂ.ಎಸ್.ನಲ್ಲಿ ಅಳವಡಿಸುವ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ಯೊಂದಿಗೆ ಸಮಾಲೋಚಿಸಲಾಗುತ್ತಿದ್ದು ಈ ಬಗ್ಗೆ ವೇತನ ಬಟವಾಡೆ ಅಧಿಕಾರಿಗಳಿಗೆ ಪ್ರತ್ಯೇಕ ಸೂಚನೆಗಳನ್ನು ನೀಡಲಾಗುವುದು.

**ಸಂಜೀವ್ ಕುಮಾರ್, ಭಾ.ಆ.ಸೇ.**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**P.R. 300**
**SC - 500**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಮೂಅಇ 53 ರಾಅವಿ 2010, ಬೆಂಗಳೂರು, ದಿನಾಂಕ: 07–03–2014**

ಸರ್ಕಾರಿ ಆದೇಶ ಸಂಖ್ಯೆ : ಮೂಅಇ 53 ರಾಅವಿ 2010 ದಿನಾಂಕ 23–01–2014 ರ ಆದೇಶ ಭಾಗದ ಪ್ಯಾರ 1 ರಲ್ಲಿ ಇರುವ "ರಾಜ್ಯ ಹುಜೂರು ಖಜಾನೆಯಲ್ಲಿ" ಎನ್ನುವುದರ ಬದಲಾಗಿ ಜಿಲ್ಲಾ ಖಜಾನೆ, ಬೆಂಗಳೂರು ನಗರದಲ್ಲಿ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಾಬಿನ್ ವನರಾಜ್. ಜೆ.**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**P.R. 336**
**SC - 50**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** "ಆಜೀವಿಕ ಸ್ಕಿಲ್ಸ್ – ಕೌಶಲ್ಯಾಭಿವೃದ್ಧಿ ತರಬೇತಿ ಹಾಗೂ ಉದ್ಯೋಗಾವಕಾಶ ಕಲ್ಪಿಸುವ ವಿಶೇಷ ಯೋಜನೆ" ಯಡಿ ಎಂಟು ಅನುಷ್ಠಾನ ಸಂಸ್ಥೆಗಳಿಗೆ ರಾಜ್ಯದ ಪಾಲಿನ ಮೊದಲನೇ ಕಂತಿನ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**

1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : J-17022/03/2013/SGSY II (SP), ದಿನಾಂಕ 15–01–2014 (ಆದೇಶ ಸಂಖ್ಯೆ : 95/ಎ.ಬಿ.ಸಿ./2014).
2. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : J-17022/04/2013/SGSY II (SP), ದಿನಾಂಕ 16–01–2014 (ಆದೇಶ ಸಂಖ್ಯೆ : 97/ಎ.ಬಿ.ಸಿ./2014).
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : J-17022/06/2013/SGSY II (SP), ದಿನಾಂಕ 16–01–2014 (ಆದೇಶ ಸಂಖ್ಯೆ :61/ಎ.ಬಿ.ಸಿ./2013).
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : J-17022/07/2013/SGSY II (SP), ದಿನಾಂಕ 15–01–2014 (ಆದೇಶ ಸಂಖ್ಯೆ : 62/ಎ.ಬಿ.ಸಿ./2013).
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : J-17022/08/2013/SGSY II (SP), ದಿನಾಂಕ 16–01–2014 (ಆದೇಶ ಸಂಖ್ಯೆ : 54/ಎ.ಬಿ.ಸಿ./2013).
6. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : J-17022/09/2013/SGSY II (SP), ದಿನಾಂಕ 16–01–2014 (ಆದೇಶ ಸಂಖ್ಯೆ : ಇಲ್ಲ).

7. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : J-17022/12/2013/SGSY II (SP), ದಿನಾಂಕ 15-01-2014 (ಆದೇಶ ಸಂಖ್ಯೆ : 55/ಎ.ಬಿ.ಸಿ./2013).
8. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : J-17022/14/2013/SGSY II (SP), ದಿನಾಂಕ 16-01-2014 (ಆದೇಶ ಸಂಖ್ಯೆ : 98/ಎ.ಬಿ.ಸಿ./2014).

**ಪ್ರಸ್ತಾವನೆ:**

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಎಸ್‌ಜಿಎಸ್‌ವೈ ಯೋಜನೆಯನ್ನು ಪುನರ್‌ರಚಿಸಿ **ಆಜೀವಿಕ** – ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್‌ಆರ್‌ಎಲ್‌ಎಂ) 2010-11 ರಿಂದ ಜಾರಿಗೊಳಿಸಿದೆ. ಇದರನ್ವಯ ರಾಜ್ಯ ಸರ್ಕಾರವು ರಾಜ್ಯದಲ್ಲಿ ಆಜೀವಿಕ ಯೋಜನೆಯನ್ನು "ಸಂಜೀವಿನಿ" ಹೆಸರಿನಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನ ಸಂಸ್ಥೆ (ಕೆಎಸ್‌ಆರ್‌ಎಲ್‌ಪಿಎಸ್) ಮೂಲಕ ಹಂತ ಹಂತವಾಗಿ ರಾಜ್ಯದಲ್ಲಿ ಜಾರಿಗೊಳಿಸಲಾಗಿದೆ.

ರಾಷ್ಟ್ರಮಟ್ಟದಲ್ಲಿ ಎಸ್‌ಜಿಎಸ್‌ವೈಯಡಿ ಒದಗಿಸಲಾಗಿರುವ ಅನುದಾನದಲ್ಲಿ ಶೇ. 15ರಷ್ಟು ಅನುದಾನವನ್ನು ವಿಶೇಷ ಯೋಜನೆ/ಕಾರ್ಯಕ್ರಮಗಳ ಜಾರಿಗಾಗಿ ಮೀಸಲಿಡಲಾಗುತ್ತಿತ್ತು. ಆದರೆ ಪುನರ್‌ರಚಿತ ಎನ್‌ಆರ್‌ಎಲ್‌ಎಂ ಯೋಜನೆಯಡಿ ರಾಷ್ಟ್ರಮಟ್ಟದಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಶೇ. 25 ರಷ್ಟು ಅನುದಾನವನ್ನು ವಿಶೇಷ ಯೋಜನೆ/ಕಾರ್ಯಕ್ರಮಗಳ ಜಾರಿಗಾಗಿ ಮೀಸಲಿಡಲಾಗಿದೆ. ಈ ವಿಶೇಷ ಯೋಜನೆಗಳನ್ನು ಸರ್ಕಾರದ ಇಲಾಖೆಗಳು, ಅರೆ ಸರ್ಕಾರದ ಇಲಾಖೆಗಳು ಸರ್ಕಾರೇತರ ಸಂಸ್ಥೆಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಜಾರಿಗೊಳಿಸಲಾಗುತ್ತದೆ.

ಪ್ರತಿಯೊಂದು ಯೋಜನೆಯೂ ಕಾಲಬದ್ಧವಾಗಿದ್ದು, ನಿರ್ದಿಷ್ಟ ಸಂಖ್ಯೆಯ ಬಡತನ ರೇಖೆಗಿಂತ ಕಡಿಮೆ ಆದಾಯ ಹೊಂದಿರುವ ಕುಟುಂಬಗಳಿಗೆ ಸ್ವ ಉದ್ಯೋಗ ಕಲ್ಪಿಸುವುದು ಮತ್ತು ಈ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲೆತ್ತುವುದು ಈ ಯೋಜನೆಯ ಪ್ರಮುಖ ಉದ್ದೇಶವಾಗಿದೆ. ಗ್ರಾಮೀಣ ಬಡಜನರನ್ನು ಸಂಘಟಿಸುವುದು, ಇವರಿಗೆ ಮೂಲಭೂತ ಸೌಲಭ್ಯ, ತಂತ್ರಜ್ಞಾನ ಮತ್ತು ಮಾರುಕಟ್ಟೆ ಸೌಲಭ್ಯ ಒದಗಿಸುವುದು, ಬೇರೆ ಇತರೆ ಚಟುವಟಿಕೆಗಳ ಮೂಲಕ ತರಬೇತಿ ಒದಗಿಸುವುದು ಮತ್ತು ಉದ್ಯೋಗದ ಅವಕಾಶಗಳನ್ನು ಕಲ್ಪಿಸುವುದು ಯೋಜನೆಯ ಮುಖ್ಯ ಗುರಿಯಾಗಿದೆ. ರಾಜ್ಯ ಸರ್ಕಾರವು ಎಸ್‌ಜಿಎಸ್‌ವೈ ವಿಶೇಷ ಯೋಜನೆಯ ಮಾರ್ಗಸೂಚಿಯನ್ನು ಮಾರ್ಪಡಿಸಿ "ಅಜೀವಿಕ ಸ್ಕಿಲ್ಸ್" ಎಂಬ "ಕೌಶಲ್ಯಾಭಿವೃದ್ಧಿ ತರಬೇತಿ ಮತ್ತು ಉದ್ಯೋಗಾವಕಾಶ ಕಲ್ಪಿಸುವ ವಿಶೇಷ ಯೋಜನೆ" ಯನ್ನು 2013-14ನೇ ಸಾಲಿನಿಂದ ಜಾರಿಗೆ ತಂದಿದೆ. ಸೆಪ್ಟೆಂಬರ್ 2013ರ ಪರಿಷ್ಕೃತ ಮಾರ್ಗಸೂಚಿಯನ್ವಯ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು 75:25 ರ ಅನುಪಾತದಲ್ಲಿ ಅನುದಾನವನ್ನು ಭರಿಸುವುದು. ಇದು ಸಂಜೀವಿನಿ ಯೋಜನೆಯ ಒಂದು ಉಪ ಯೋಜನೆಯಾಗಿದೆ.

ವಿವಿಧ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಇವರು ಅನೇಕ ಯೋಜನಾ ಅನುಷ್ಠಾನ ಸಂಸ್ಥೆಗಳನ್ನು ಆಯ್ಕೆ ಮಾಡಿ, ಯೋಜನೆಯಡಿ ಸಹಕಾರ ಹಾಗೂ ಉಸ್ತುವಾರಿಗಾಗಿ ಎನ್‌ಐಆರ್‌ಡಿ, ಹೈದರಾಬಾದ್ ಸಂಸ್ಥೆಯನ್ನು "ತಾಂತ್ರಿಕ ಬೆಂಬಲ ಸಂಸ್ಥೆ (Technical Support Agency – TSA)" ನಾಮಾಂಕಿತಗೊಳಿಸಿದೆ. ಅನುಷ್ಠಾನ ಸಂಸ್ಥೆಗಳಿಗೆ ಬಿಡುಗಡೆ ಮಾಡುವ ಅನುದಾನವನ್ನು ವಿವಿಧ ಕ್ಷೇತ್ರಗಳಲ್ಲಿ ವೃತ್ತಿ ಆಧಾರಿತ ತರಬೇತಿ ನೀಡುವ ಕೆಳಕಂಡ ಅನುಷ್ಠಾನ ಸಂಸ್ಥೆಗಳಿಗೆ ಓದಲಾಗಿದೆ (1) ರಿಂದ (8) ರ ವರೆಗೆ ಕೇಂದ್ರವು ತನ್ನ ಪಾಲಿನ ಒಂದನೇ ಕಂತಿನ ಅನುದಾನ ಒಟ್ಟು ರೂ. 27,65,14,398/– (ರೂ. ಇಪ್ಪತ್ತೇಳು ಕೋಟಿ ಅರವತ್ತೈದು ಲಕ್ಷದ ಹದಿನಾಲ್ಕು ಸಾವಿರದ ಮುನ್ನೂರಾತ್ತೊಂಬತ್ತೆಂಟು ಮಾತ್ರ) ಕೆಳಕಂಡ ಅನುಷ್ಠಾನ ಸಂಸ್ಥೆಗಳಿಗೆ ಎನ್‌ಐಆರ್‌ಡಿ, ಹೈದರಾಬಾದ್ ಮೂಲಕ ಬಿಡುಗಡೆಗೊಳಿಸಿದೆ.

ರಾಜ್ಯ ಸರ್ಕಾರವು 9 ಯೋಜನಾ ಪ್ರಸ್ತಾವನೆಗಳನ್ನು ಅನುಮೋದಿಸಲು ಶಿಫಾರಸ್ಸು ಮಾಡಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯಕ್ಕೆ ಸಲ್ಲಿಸಲಾಗಿತ್ತು. ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡುವ ಸಲುವಾಗಿ ಅನುದಾನ ಕೋರಿ ಆರ್ಥಿಕ ಇಲಾಖೆಯನ್ನು ಕೋರಲಾಗಿತ್ತು. ಆರ್ಥಿಕ ಇಲಾಖೆಯು ದಿನಾಂಕ 19-11-2013 ರಂದು ಒಟ್ಟು ರೂ. 9.66 ಕೋಟಿ ಅನುದಾನವನ್ನು ಒದಗಿಸಿದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ITCOT ಸಂಸ್ಥೆಯ ಪ್ರಸ್ತಾವನೆಯನ್ನು ಅನುಮೋದಿಸಿರುವುದಿಲ್ಲ. ಉಳಿದ 8 ಪ್ರಸ್ತಾವನೆಗಳಿಗೆ ಮಾತ್ರ ಅನುಮೋದನೆ ನೀಡಿದೆ.

(ರೂ. ಗಳಲ್ಲಿ)

| ಕ್ರಮ ಸಂಖ್ಯೆ | ಪತ್ರ ಸಂಖ್ಯೆ ಮತ್ತು ದಿನಾಂಕ | ಯೋಜನಾ ಅನುಷ್ಠಾನ ಸಂಸ್ಥೆಯ ಹೆಸರು | ಕೇಂದ್ರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಬಿಡುಗಡೆ ಮಾಡಬೇಕಾದ ಮೊದಲನೇ ಕಂತಿನ ಅನುದಾನ |
|---|---|---|---|---|
| 1 | ಓದಲಾಗಿದೆ (1) ರಂತೆ | M/s Kapston Facilities Management Pvt. Ltd. (PRN-AP2013CR1207) | 92,89,681 | 30,96,500 |
| 2 | ಓದಲಾಗಿದೆ (2) ರಂತೆ | M/s Wazir Advisors Pvt. Ltd. (PRN-DL 2013 CR1140) | 2,80,75,055 | 93,58,300 |
| 3 | ಓದಲಾಗಿದೆ (3) ರಂತೆ | M/s IL & FS Education & Technology Services Ltd., (MH2013CR1083) | 8,79,46,637 | 2,93,15,500 |
| 4 | ಓದಲಾಗಿದೆ (4) ರಂತೆ | M/s Ikya Human Capital Solutions Ltd., (KN2013CR1078) | 2,74,84,264 | 91,61,400 |
| 5 | ಓದಲಾಗಿದೆ (5) ರಂತೆ | M/s Laurus Edutech Pvt. Ltd., (TN2013CR1187) | 2,51,72,246 | 83,90,700 |

| ಕ್ರಮ ಸಂಖ್ಯೆ | ಪತ್ರ ಸಂಖ್ಯೆ ಮತ್ತು ದಿನಾಂಕ | ಯೋಜನಾ ಅನುಷ್ಠಾನ ಸಂಸ್ಥೆಯ ಹೆಸರು | ಕೇಂದ್ರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಬಿಡುಗಡೆ ಮಾಡಬೇಕಾದ ಮೊದಲನೇ ಕಂತಿನ ಅನುದಾನ |
|---|---|---|---|---|
| 6 | ಓದಲಾಗಿದೆ (6) ರಂತೆ | M/s Technopak Advisors Pvt. Ltd., (PRN-HR2013CR1091) | 4,19,49,746 | 1,39,83,200 |
| 7 | ಓದಲಾಗಿದೆ (7) ರಂತೆ | M/s Apparel Retail Training & Job Solutions (PRN – 1193) | 1,12,36,023 | 37,45,300 |
| 8 | ಓದಲಾಗಿದೆ (8) ರಂತೆ | M/s Sriram New Horizons (PRN –DL2013 CR1183) | 4,53,60,746 | 1,51,20,200 |
| | | **ಒಟ್ಟು** | **27,65,14,398** | **9,21,71,100** |

ರಾಜ್ಯ ಸರ್ಕಾರವು, ಒಂದನೇ ಕಂತಿನ ಅನುದಾನವಾಗಿ ಮೇಲ್ಕಂಡ 8 ಅನುಷ್ಠಾನ ಸಂಸ್ಥೆಗಳಿಗೆ ಕೆಎಸ್‌ಆರ್‌ಎಲ್‌ಪಿಎಸ್ ಮೂಲಕ ರೂ.9,21,71,100/– ಗಳನ್ನು (ರೂ. ಒಂಬತ್ತು ಕೋಟಿ ಇಪ್ಪತ್ತೊಂದು ಲಕ್ಷದ ಎಪ್ಪತ್ತೊಂದು ಸಾವಿರದ ಒಂದು ನೂರು ಮಾತ್ರ) ಬಿಡುಗಡೆಗೊಳಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 43 ಎಸ್‌ಜೆವೈ (ವಿಶೇಷ) 2013, ಬೆಂಗಳೂರು, ದಿನಾಂಕ: 10–02–2014**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, "ಕೌಶಲ್ಯಾಭಿವೃದ್ಧಿ ತರಬೇತಿ ಹಾಗೂ ಉದ್ಯೋಗಾವಕಾಶ ಕಲ್ಪಿಸುವ ವಿಶೇಷ ಯೋಜನೆ" ಯಡಿ ಅನುಬಂಧದಲ್ಲಿ ತೋರಿಸಿರುವ 8 ಅನುಷ್ಠಾನ ಸಂಸ್ಥೆಗಳಿಗೆ ತನ್ನ ಪಾಲಿನ ಒಂದನೇ ಕಂತಿನ ಅನುದಾನ ಒಟ್ಟು ರೂ.9,21,71,100/– ಗಳನ್ನು (ರೂ. ಒಂಬತ್ತು ಕೋಟಿ ಇಪ್ಪತ್ತೊಂದು ಲಕ್ಷದ ಎಪ್ಪತ್ತೊಂದು ಸಾವಿರದ ಒಂದು ನೂರು ಮಾತ್ರ) ಕೆಎಸ್‌ಆರ್‌ಎಲ್‌ಪಿಎಸ್, ಬೆಂಗಳೂರು ಮೂಲಕ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

- **ಮೇಲ್ಕಂಡ ರಾಜ್ಯದ ಪಾಲಿನ ಅನುದಾನವನ್ನು ಪ್ರಧಾನ ಲೆಕ್ಕಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತಿಗಳಿಗೆ ಸಹಾಯ–6 ಗ್ರಾಮ ಪಂಚಾಯತಿಗಳು –01– ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ (ಎನ್‌ಆರ್‌ಎಲ್‌ಎಂ) 2013–14 (2501–01–198–6–01) (ಹೊಸ ಕೋಡ್ 2501–00–101–0–05) ರಡಿ ಭರಿಸುವುದು.**
- ಅಪರ ಅಭಿಯಾನ ನಿರ್ದೇಶಕರು, ಕೆಎಸ್‌ಆರ್‌ಎಲ್‌ಪಿಎಸ್, ಬೆಂಗಳೂರು ಇವರು ರುಜು ಮಾಡಿದ ಸ್ವೀಕರ್ತನ ರಸೀತಿ (payees receipt) ನ್ನು ಸರ್ಕಾರಕ್ಕೆ ಸಲ್ಲಿಸುವುದು. ನಂತರ ಸ್ವೀಕರ್ತನ ರಸೀತಿ (payees receipt) ಗೆ ನಿರ್ದೇಶಕರು (ಇ–ಆಡಳಿತ) ಮತ್ತು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಮೇಲು ರುಜು ಮಾಡುವುದು. ಉಪ ನಿರ್ದೇಶಕರು (ಸ್ವಉಕಾ), , ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು, ಇವರು ಅನುದಾನವನ್ನು ಅಭಿಯಾನ ನಿರ್ದೇಶಕರು, ಕೆಎಸ್‌ಆರ್‌ಎಲ್‌ಪಿಎಸ್, ಬೆಂಗಳೂರು ಇವರ ಹೆಸರಿನಲ್ಲಿ ಸೆಳೆಯುವುದು.
- ರಾಜ್ಯದ ಪಾಲಿನ ಅನುದಾನವನ್ನು ಈಗಾಗಲೇ ಎನ್‌ಆರ್‌ಎಲ್‌ಎಂ ಯೋಜನೆಗಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ಲೆಕ್ಕಪತ್ರ ನಿರ್ವಹಿಸತಕ್ಕದ್ದು.
- ಅನುಬಂಧದಲ್ಲಿನ ಅನುಷ್ಠಾನ ಸಂಸ್ಥೆಗಳು ಈ ಯೋಜನೆಯಡಿ ಪ್ರತ್ಯೇಕ ಬ್ಯಾಂಕ್ ಖಾತೆಯನ್ನು ತೆರೆದು ವಿವರವನ್ನು ಕೆಎಸ್‌ಆರ್‌ಎಲ್‌ಪಿಎಸ್, ಬೆಂಗಳೂರು ಇಲ್ಲಿಗೆ ತಿಳಿಸುವುದು.
- ಕೇಂದ್ರ ಅನುಮೋದಿಸಿದ 8 ಸಂಸ್ಥೆಗಳಿಗೆ ರಾಜ್ಯದ ಪಾಲಿನ ಅನುದಾನವನ್ನು ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ನೀಡುವ ನಿರ್ದೇಶನದಂತೆ ಕೆಎಸ್‌ಆರ್‌ಎಲ್‌ಪಿಎಸ್ ಸಂಸ್ಥೆ ಬಿಡುಗಡೆ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 388/ವೆಚ್ಚ–6/2013 ಆರ್ಥಿಕ ಇಲಾಖೆ (ವೆಚ್ಚ–6) ದಿನಾಂಕ 19–11–2013 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರೋಹಿಣಿ ಸಿಂಧೂರಿ,**
ನಿರ್ದೇಶಕರು (ಇ–ಆಡಳಿತ) ಮತ್ತು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 43 ಎಸ್‌ಜಿವೈ (ವಿಶೇಷ) 2013, ಬೆಂಗಳೂರು, ದಿನಾಂಕ: 10-02-2014 ರ ಅನುಬಂಧ**

(ರೂ. ಗಳಲ್ಲಿ)

| ಕ್ರಮ ಸಂಖ್ಯೆ | ಯೋಜನಾ ಅನುಷ್ಠಾನ ಸಂಸ್ಥೆಯ ಹೆಸರು | ಕೇಂದ್ರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|
| 1 | M/s Kapston Facilities Management Pvt. Ltd. (PRN-AP2013CR1207) | 92,89,681 | 30,96,500 |
| 2 | M/s Wazir Advisors Pvt. Ltd. (PRN-DL 2013 CR1140) | 2,80,75,055 | 93,58,300 |
| 3 | M/s IL & FS Education & Technology Services Ltd., (MH2013CR1083) | 8,79,46,637 | 2,93,15,500 |
| 4 | M/s Ikya Human Capital Solutions Ltd., (KN2013CR1078) | 2,74,84,264 | 91,61,400 |
| 5 | M/s Laurus Edutech Pvt. Ltd., (TN2013CR1187) | 2,51,72,246 | 83,90,700 |
| 6 | M/s Technopak Advisors Pvt. Ltd., (PRN-HR2013CR1091) | 4,19,49,746 | 1,39,83,200 |
| 7 | M/s Apparel Retail Training & Job Solutions (PRN – 1193) | 1,12,36,023 | 37,45,300 |
| 8 | M/s Sriram New Horizons (PRN –DL2013 CR1183) | 4,53,60,746 | 1,51,20,200 |
| | ಒಟ್ಟು | **27,65,14,398** | **9,21,71,100** |

**ರೋಹಿಣಿ ಸಿಂಧೂರಿ,**
ನಿರ್ದೇಶಕರು (ಇ-ಆಡಳಿತ) ಮತ್ತು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**P.R. 338**

## ಒಳಾಡಳಿತ ಸಚಿವಾಲಯ

**ವಿಷಯ :** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾ.ಮೂ. ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 4 ಪಿಸಿಇ 2012, ದಿನಾಂಕ 09-03-2012.
2. ದಿನಾಂಕ 13-08-2012ರ ಸರ್ಕಾರದ ಅಧಿಸೂಚನೆ ಸಂಖ್ಯೆ ಹೆಚ್‌ಡಿ 11 ಪಿಸಿಇ 2012.
3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು ಬೆಂಗಳೂರು ಇವರ ಮನವಿ ದಿನಾಂಕ 01-02-2014.
4. ಮಹಾಲೇಖಪಾಲರ ಕಛೇರಿ ಪತ್ರ ಸಂ: Pr. AG (G&SSA)/13-14/CASS-1/A10/145 ದಿನಾಂಕ : 21/22-10-2013.

**ಪ್ರಸ್ತಾವನೆ:**

ದಿನಾಂಕ 02-03-2012 ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ಜನವರಿ ತಿಂಗಳಲ್ಲಿ, ದಿನಾಂಕ 06-01-2014, 07-01-2014, 17.01.2014 ಮತ್ತು 22-01-2014. 04 ಮಹತ್ವದ ದಿನಗಳು ಹಾಗೂ 18-01-2014, 21-01-2014 2 ಮಹತ್ವವಲ್ಲದ ದಿನಗಳು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ರೂ.52,000/- (ರೂಪಾಯಿ ಐವತ್ತೆರಡು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಮೇಲೆ ಓದಲಾದ ಉಲ್ಲೇಖಿತ (4)ರ ಮಹಾಲೇಖಪಾಲರ ಪತ್ರದಲ್ಲಿ ಸರ್ಕಾರಿ ವಕೀಲರಿಗೆ ನೀಡುವ ಸಂಭಾವನೆಯಲ್ಲಿ ಶೇಕಡ 1%ರ ಮೊತ್ತವನ್ನು ಟಿ.ಡಿ.ಎಸ್. ಆಗಿ ಕಡಿತಗೊಳಿಸಬೇಕೆಂದು ಸೂಚಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ: 15-03-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರಮ ಸಂಖ್ಯೆ | ಸಂಭಾವನೆಯ ವಿವರ | ಮೊತ್ತ ರೂ. |
|---|---|---|
| 1. | Effective hearing (4 days) dated : 06-01-2014, 07-01-2014, 17-01-2014 and 22-01-2014 @ Rs. 10,000/- per day | 40,000.00 |
| | Non-effective hearing (2 days) dated : 18-01-2014 and 21-01-2014 @ Rs. 6,000/- per day | 12,000.00 |
| ಒಟ್ಟು ಮೊತ್ತ (ಐವತ್ತೆರಡು ಸಾವಿರ ಮಾತ್ರ) | | **52,000.00** |

ಮಹಾಲೇಖಪಾಲರು ಕರ್ನಾಟಕ ಇವರ ಸೂಚನೆಯನ್ವಯ ಶ್ರೀ ಜಿ.ಕೆ. ಬೇಕಲ್‌ರವರಿಗೆ ಸಂಭಾವನೆಯ ಮೊತ್ತದ ರೂ. 52,000/– ಗಳ ಮೊತ್ತಕ್ಕೆ ಶೇಕಡ 1% ಟಿ.ಡಿ.ಎಸ್. ಹಣವನ್ನು ಕಡಿತಗೊಳಿಸಿ ಅಂದರೆ ರೂ. 520/– (ರೂಪಾಯಿ ಐದುನೂರ ಇಪ್ಪತ್ತು ಮಾತ್ರ) ಗಳನ್ನು **'Head of Account-0021 taxes on Income'** ಗೆ ಪಾವತಿಸಲು ತಿಳಿಸಲಾಗಿದೆ. ಬಾಕಿ ಹಣ ರೂ. 51,480/– (ರೂಪಾಯಿ ಐವತ್ತೊಂದು ಸಾವಿರದ ನಾಲ್ಕುನೂರ ಎಂಬತ್ತು ಮಾತ್ರ)ಗಳನ್ನು ಮಂಜೂರು ಮಾಡಲಾಗಿದೆ.

1. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ವಿಶೇಷ ತನಿಖಾ ಆಯೋಗಗಳು"** ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ದಿನಾಂಕ 27–01–2012 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ)

P.R. 340
SC - 50

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ರಾಜಶೇಖರ್ ಸ್ವಾಮೀಜಿ, ಹೆಚ್‌ಸಿ (ವೈ), ಜಿಲ್ಲಾ ನಿಯಂತ್ರಣ ಕೊಠಡಿ, ಬಾಗಲಕೋಟೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ವೈರ್‌ಲೆಸ್, ಬೆಂಗಳೂರು ಇವರ ಆದೇಶ ಸಂಖ್ಯೆ : ಪನ್‌ಸಿಆರ್6/ಸಿ/2013 (ಓ.ಬಿ. ಸಂಖ್ಯೆ : 33/2013) ದಿನಾಂಕ : 01–06–2013.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾನಿರೀಕ್ಷಕರು, ವೈರ್‌ಲೆಸ್, ಬೆಂಗಳೂರು ಇವರ ಆದೇಶ ಸಂಖ್ಯೆ : ಅಪೀಲು (1)1/ಸಿ/ಡಿಐಜಿಪಿ(ವೈ) 2013–14, (ಓ.ಬಿ. ಸಂಖ್ಯೆ : 76/2013) ದಿನಾಂಕ: 07–08–2013.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 05–11–2013.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8)67/2012–13, ದಿನಾಂಕ : 20–12–2013.

**ಪ್ರಸ್ತಾವನೆ :**

ಶ್ರೀ ರಾಜಶೇಖರ್ ಸ್ವಾಮೀಜಿ, ಹೆಚ್‌ಸಿ (ವೈ), (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಜಿಲ್ಲಾ ನಿಯಂತ್ರಣ ಕೊಠಡಿ, ಬಾಗಲಕೋಟೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

1. ನಿಮ್ಮ ಧರ್ಮಪತ್ನಿಯಾದ ಶ್ರೀಮತಿ ಪಾರ್ವತಿರವರನ್ನು ವಿವಾಹವಾಗುವ ಕಾಲಕ್ಕೆ ದಿನಾಂಕ : 08–05–2002ರಂದು ರೂ. 1,00,000/– (ರೂಪಾಯಿ ಒಂದು ಲಕ್ಷ) ಮಾತ್ರ ನಗದು ಮತ್ತು 10(ಹತ್ತು) ತೊಲೆ ಬಂಗಾರವನ್ನು ವರದಕ್ಷಿಣೆ ರೂಪದಲ್ಲಿ ತೆಗೆದುಕೊಂಡಿದ್ದು, ಕೆ.ಸಿ.ಎಸ್. ನಡತೆ ನಿಯಮ 1966 ಉಪ ನಿಯಮ 14(ಎ)(1) ಹಾಗೂ ವರದಕ್ಷಿಣೆ ನಿರ್ಮೂಲನಾ ಕಾಯ್ದೆ 1961ರ ಉಪನಿಯಮ 4ನೇದ್ದವುಗಳನ್ನು ಉಲ್ಲಂಘಿಸಿರುವಿರಿ.
2. ಮದುವೆಯ ಕಾಲಕ್ಕೆ ಕೊಟ್ಟ ವರದಕ್ಷಿಣೆ ಸಾಲದಕ್ಕೆ ರೂ. 2,50,000/– ಮತ್ತು 10 ತೊಲೆ ಬಂಗಾರ ಹೆಚ್ಚಿನ ವರದಕ್ಷಿಣೆ ಬೇಡಿಕೆ ಇಟ್ಟು ಕೆ.ಸಿ.ಎಸ್. ನಡತೆ ನಿಯಮ 1966 ಉಪ ನಿಯಮ 16(ಎ)(2)ನೇದ್ದವುಗಳನ್ನು ಉಲ್ಲಂಘಿಸಿರುವಿರಿ
3. ತಂದೆ, ತಾಯಿ ಹಾಗೂ ಸಹೋದರಿಯವರೊಂದಿಗೆ ಸೇರಿ ನಿಮ್ಮ ಪತ್ನಿ ಶ್ರೀಮತಿ ಪಾರ್ವತಿಯವರಿಗೆ ಮಾನಸಿಕ ವ ದೈಹಿಕ ಹಿಂಸೆ ನೀಡಿ ಮಹಿಳಾ ದೌರ್ಜನ್ಯ ತಡೆ ಕಾಯ್ದೆ 2005ನೇದ್ದನ್ನು ಉಲ್ಲಂಘಿಸಿರುವಿರಿ.
4. ನಿಮ್ಮ ಪತ್ನಿ ಶ್ರೀಮತಿ ಪಾರ್ವತಿ ಹಾಗೂ ಮಗಳು ಸಿಂಧು ಇವಳನ್ನು ನಿಮ್ಮ ಹತ್ತಿರ ಕರೆದುಕೊಂಡು ಬಂದು ಸಂಸಾರ ನಡೆಸದೆ ಅವರಿಗೆ ಹೊಟ್ಟೆ ಬಟ್ಟೆ ಉಪಜೀವನಕ್ಕೆ ಧನ ಸಹಾಯ ನೀಡದೇ ಅವರ ಯೋಗಕ್ಷೇಮದ ಬಗ್ಗೆ ನಿರ್ಲಕ್ಷಿಸಿ ಕಳೆದ 5 ವರ್ಷಗಳಿಂದ ತವರು ಮನೆಯಲ್ಲಿಯೇ ಬಿಟ್ಟು ಕರ್ನಾಟಕ ಪೊಲೀಸ್ ಮ್ಯಾನುಯಲ್ ಆದೇಶ ಸಂಖ್ಯೆ : 319ನ್ನು ಉಲ್ಲಂಘಿಸಿರುವಿರಿ.
5. ನಿಮ್ಮ ಪತ್ನಿ ಶ್ರೀಮತಿ ಪಾರ್ವತಿ ಜೀವಂತ ಇರುವಾಗಲೇ ಅವಳಿಂದ ನ್ಯಾಯ ಬದ್ಧವಾಗಿ ವಿಚ್ಛೇದನ ಪಡೆಯದೆ ಗದಗ ಜಿಲ್ಲೆಯ ಚಿಕ್ಕನರಗುಂದ ಗ್ರಾಮದ ಸಂಗಯ್ಯಾ ತಂ. ಗುರುಬಸಯ್ಯಾ ವಿರಕ್ತಮಠ ಇವರ ಮಗಳು ಮಹಾದೇವಿಯೊಂದಿಗೆ ಎರಡನೇಯ ಮದುವೆ ಮಾಡಿಕೊಂಡು ಕೆ.ಸಿ.ಎಸ್. ನಡತೆ ನಿಯಮಗಳು 1966 ಉಪ ನಿಯಮ 28ನ್ನು ಉಲ್ಲಂಘಿಸಿರುವಿರಿ.
6. ದಿನಾಂಕ : 14–10–2008 ಸಾಯಂಕಾಲ 17.00 ಗಂಟೆಯಿಂದ ಅನಧಿಕೃತವಾಗಿ ನಿಮ್ಮ ಕರ್ತವ್ಯಕ್ಕೆ ಗೈರು ಹಾಜರಿ ಉಳಿದಿರುತ್ತೀರಿ.

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ವಿರುದ್ಧ ಆರೋಪವು ಭಾಗಶಃ ಸಾಬೀತಾದ ಕಾರಣ ಶಿಸ್ತು ಪ್ರಾಧಿಕಾರವು ಕಾರಣ ಕೇಳುವ ನೋಟೀಸು ಜಾರಿ ಮಾಡಿ, ಅರ್ಜಿದಾರರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ವೈರ್‌ಲೆಸ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 01–06–2013ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ **"ಒಂದು ವರ್ಷದ ಅವಧಿಗೆ"** ಮುಂದೂಡಿ, ಸದರಿಯವರ ಅನಧಿಕೃತ ಗೈರು ಹಾಜರಿ ಎಂದು ಭಾವಿಸುವ ಅಮಾನತ್ತು ಅವಧಿಯಾದ ದಿನಾಂಕ : 14–10–2008ರಿಂದ ದಿನಾಂಕ : 19–02–2009ರವರೆಗಿನ ಒಟ್ಟು 129 ದಿನಗಳನ್ನು ಅಮಾನತ್ತೆಂದೇ ಪರಿಗಣಿಸಲಾದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾನಿರೀಕ್ಷಕರು, ವೈರ್‌ಲೆಸ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 07–08–2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ ಪರಿಷ್ಕರಣ ಮೇಲ್ಮನವಿಯಲ್ಲಿ ನಮೂದಿಸಿರುವ ಕಾರಣಗಳು ಸಮಂಜಸ ಇಲ್ಲದೇ ಇರುವುದರಿಂದ ಮತ್ತು ಸದರಿಯವರಿಗೆ ನೀಡಿದ ದಂಡನೆ ಸಾಬೀತಾದ ಆರೋಪಕ್ಕೆ ಅನುಗುಣವಾಗಿ ಕಂಡುಬರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 163 ಪೊಸಿಅ 2013, ಬೆಂಗಳೂರು, ದಿನಾಂಕ : 17–03–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜಶೇಖರ್ ಸ್ವಾಮೀಜಿ, ಹೆಚ್.ಸಿ (ವೈ), ಜಿಲ್ಲಾ ನಿಯಂತ್ರಣ ಕೊಠಡಿ, ಬಾಗಲಕೋಟೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

P.R. 341

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ.ಎಸ್. ಶಿವಕುಮಾರ್, ಎಪಿಸಿ–129, ಡಿ.ಎ.ಆರ್. ಚಿಕ್ಕಬಳ್ಳಾಪುರ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಬಳ್ಳಾಪುರ ಜಿಲ್ಲೆ ಇವರ ಆದೇಶ ಸಂಖ್ಯೆ : ಡಿಇ/12/2010–11 (ಓ.ಬಿ. ಸಂಖ್ಯೆ : 12/2012) ದಿನಾಂಕ : 03–02–2012.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ : ಅಪೀಲು/35/ಶಿಕ್ಷೆ/2012 (ಓ.ಬಿ. ಸಂಖ್ಯೆ : 0175/2012–13) ದಿನಾಂಕ: 02–03–2012.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 08–07–2013.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)26/2013–14, ದಿನಾಂಕ : 06–09–2013.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 198 ಸಿಎನ್‌ಎಸ್ 2013, ದಿನಾಂಕ : 04–03–2014.

**ಪ್ರಸ್ತಾವನೆ :**

ಶ್ರೀ ಕೆ.ಎಸ್. ಶಿವಕುಮಾರ್, ಎಪಿಸಿ–129, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಡಿ.ಎ.ಆರ್. ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಮತ್ತು ದುರ್ನಡತೆಯನ್ನು ತೋರಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ಡಿ.ಎ.ಆರ್. ಚಿಕ್ಕಬಳ್ಳಾಪುರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಶಿವಕುಮಾರ್, ಎಪಿಸಿ–129, ಆದ ನೀವು ದಿನಾಂಕ : 21–07–2010ರಂದು ದೈನಂದಿನ ಕರ್ತವ್ಯಕ್ಕೆ ತಡವಾಗಿ ಹಾಜರಾಗಿರುತ್ತೀರಿ. ಆ ಸಮಯದಲ್ಲಿ ಕರ್ತವ್ಯ ನಿರತ ಅಧಿಕಾರಿಯವರಾದ ಶ್ರೀ ನಾಗೇಂದ್ರ ಪ್ರಸಾದ್, ಆರ್‌ಎಸ್‌ಐ, ಡಿಎಆರ್, ಚಿಕ್ಕಬಳ್ಳಾಪುರರವರು ತಡವಾಗಿ ಬಂದ ಬಗ್ಗೆ ಹಾಜರಾತಿಯಲ್ಲಿ ಎಹೆಚ್‌ಸಿ–17, ಶ್ರೀ ವೆಂಕಟೇಶಪ್ಪರವರು ಕರ್ತವ್ಯ ನಿರತ ಅಧಿಕಾರಿಯವರು ತಡವಾಗಿ ಬಂದ ಸಂಬಂಧ ಆರ್‌ಪಿಐರವರಿಗೆ ದೂರವಾಣಿ ಮೂಲಕ ಕರೆಮಾಡಿ ತಿಳಿಸಿರುತ್ತಾರೆ. ಕರ್ತವ್ಯ ನಿರತ ಅಧಿಕಾರಿಯವರು ಹಾಜರಾತಿ ಪಡೆಯುವ ಸಮಯದಲ್ಲಿ ಆರ್‌ಪಿಐರವರಿಗೆ ಕರೆ ಮಾಡಿದ ಬಗ್ಗೆ ಕೇಳಿದಾಗ ಎಹೆಚ್‌ಸಿ–17 ವೆಂಕಟೇಶಪ್ಪರವರ ಕಡೆ ನೋಡಿ ಮುಖ ಘರ್ಜಿಸುತ್ತಾ ಅಸಭ್ಯ ರೀತಿಯಲ್ಲಿ ಕಣ್ಣುಹುಬ್ಬುಗಳನ್ನು ಹಾರಿಸುತ್ತಾ ಕರ್ತವ್ಯ ನಿರತ ಅಧಿಕಾರಿ ತಡವಾಗಿ ಬಂದ ಬಗ್ಗೆ ಕೇಳುತ್ತೀರಲ್ಲಾ. ಎಸ್.ಪಿ. ಸಾಹೇಬರೂ ಒಂದರಿಂದ ಒಂದೂವರೆ ಗಂಟೆ ಮುಂಚಿತವಾಗಿ ಕವಾಯತ್ತು ಇಡುವ ಬಗ್ಗೆ ಯಾವ ಕಾನೂನಿನಲ್ಲಿದೆ ? ಅವರು ಮಾಡಿದ್ದೇ ಕಾನೂನು, ಹೇಳಿದ್ದೇ ಕಾನೂನು, ಇದನ್ನು ನೀವು ಕೇಳುವುದಕ್ಕೆ ಆಗುವುದಿಲ್ಲವೇ? ಎಂದು ಹೆಚ್‌ಸಿ–17 ವೆಂಕಟೇಶಪ್ಪರವರಿಗೆ ಎಸ್.ಪಿ. ಸಾಹೇಬರ ಆದೇಶಕ್ಕೆ ಧಕ್ಕೆ ಬರುವ ರೀತಿಯಲ್ಲಿ ಹಾಜರಾತಿ ಪಡೆಯುವ ಸಿಬ್ಬಂದಿಗಳ ಎದುರಿನಲ್ಲಿ ಅಸಭ್ಯವಾಗಿ ನಿಂದಿಸುತ್ತಾ ಕವಾಯತ್ತಿನ ವೇಳೆಯ ಬಗ್ಗೆ ಚರ್ಚಿಸಿ ಪ್ರಚೋದನಾಕಾರಿಯಾಗಿ ಮಾತನಾಡುತ್ತಾ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ತೋರ್ಪಡಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ಭಾಗಶಃ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 03–02–2012ರ ಆದೇಶದಲ್ಲಿ ಅರ್ಜಿದಾರರ ಅಮಾನತ್ತಿನ ಅವಧಿ ದಿನಾಂಕ : 21–07–2010 ರಿಂದ 07–09–2010ರವರೆಗೆ ಅಮಾನತ್ತೆಂದು ಪರಿಗಣಿಸಿ, ಕರ್ನಾಟಕ ಪೊಲೀಸ್ ಕಾಯಿದೆ 1963 ನಿಯಮ 23ಎ(2) ರೀತ್ಯಾ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ಮುಂದೂಡಿದ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 02–03–2013ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪ್ರಕರಣದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರ ಆದೇಶವನ್ನು ಪ್ರಶ್ನಿಸಿ, ಅವರ ಆದೇಶಕ್ಕೆ ಧಕ್ಕೆ ಬರುವ ರೀತಿಯಲ್ಲಿ ಸಿಬ್ಬಂದಿಗಳ ಎದುರಿಗೆ ವರ್ತಿಸಿರುವುದು ಹಾಗೂ ಪ್ರಚೋದನಾಕಾರಿಯಾಗಿ ಮಾತನಾಡಿರುವುದು ಶಿಸ್ತಿನ ಇಲಾಖೆಗೆ ತಕ್ಕುದ್ದಲ್ಲದ ರೀತಿಯಲ್ಲಿ ಆಗಿರುತ್ತದೆ. ಆದರೂ ಸಹಾ ಇವರ ಅಶಿಸ್ತಿನ ವರ್ತನೆಗೆ ಸಂಬಂಧಿಸಿದಂತೆ ವಿಧಿಸಿರುವ ದಂಡನೆಯು ಹೆಚ್ಚಿನದಾಗಿರುವ ಹಿನ್ನೆಲೆಯಲ್ಲಿ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸುವ ಕುರಿತಂತೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 87 ಪೊಸಿಅ 2013, ಬೆಂಗಳೂರು, ದಿನಾಂಕ : 17–03–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎಸ್. ಶಿವಕುಮಾರ್, ಎಪಿಸಿ–129, ಡಿ.ಎ.ಆರ್. ಚಿಕ್ಕಬಳ್ಳಾಪುರ ಜಿಲ್ಲೆ ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿದ್ದ ದಂಡನೆಯನ್ನು ಭಾಗಶಃ ಮಾರ್ಪಡಿಸಿ **"ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಒಂದು ವರ್ಷ ಕಾಲ ಮುಂದೂಡುವ"** ದಂಡನೆಯನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 342

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಎಲ್ ವೇಣುಗೋಪಾಲ್, ಪಿ.ಐ. ಜಾಗೃತ ದಳ, ಹೆಸ್ಕಾಂ, ಬೆಳಗಾವಿ ಠಾಣೆ, ಬೆಳಗಾವಿ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ : ಡಿಇ/119/ಉವ/2012, ದಿನಾಂಕ : 22–11–2012.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ : ಸಿಬಿ(8)97/2012–13, (ಓ.ಬಿ. ಸಂಖ್ಯೆ : 195/2013) ದಿನಾಂಕ: 22–06–2013.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 25–10–2013.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8)97/2012–13, ದಿನಾಂಕ : 09–01–2014.

**ಪ್ರಸ್ತಾವನೆ :**

ಶ್ರೀ ಎಲ್. ವೇಣುಗೋಪಾಲ್, ಪಿ.ಐ. ಜಾಗೃತ ದಳ, ಹೆಸ್ಕಾಂ, ಬೆಳಗಾವಿ ಠಾಣೆ, ಬೆಳಗಾವಿ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಹಾವೇರಿ ಜಿಲ್ಲೆ, ಶಿಗ್ಗಾಂವ ವೃತ್ತದಲ್ಲಿ ಸಿ.ಪಿ.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ತೀರಾ ಉದಾಸೀನತೆ, ಘೋರ ವಿಮುಖತೆ ಮತ್ತು ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ತಡಸ ಪೊಲೀಸ್ ಗುನ್ನಾ ನಂ. 48/2006 ಕಲಂ 279, 304(ಎ) ಐಪಿಸಿ ಮತ್ತು 134 ಸಹಕಲಂ 187 ಎಂ.ವ್ಹಿ. ಆ್ಯಕ್ಟ್ ರಡಿಯ ಅಪರಾಧ ಪ್ರಕರಣದ ತನಿಖಾಧಿಕಾರಿಯಾಗಿ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿ "ಸಿ" ಅಂತಿಮ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಲು ಅನುಮತಿಯನ್ನು ಎಸ್.ಪಿ. ಹಾವೇರಿ ಜಿಲ್ಲೆಯವರಿಂದ ದಿನಾಂಕ : 08–02–2007 ರಂದು ಸ್ವೀಕರಿಸಿದ ನಂತರ ಅಂತಿಮ ವರದಿಯನ್ನು ಘನ ನ್ಯಾಯಾಲಯಕ್ಕೆ ಸಲ್ಲಿಸಲು ವಿಫಲರಾಗಿರುವಿರಿ.

ಅಂತಿಮ ವರದಿಯನ್ನು ವಿನಾಕಾರಣವಾಗಿ 1 ತಿಂಗಳ 4 ದಿವಸ ಇಟ್ಟುಕೊಂಡು ನ್ಯಾಯಾಲಯಕ್ಕೆ ಸಲ್ಲಿಸದೇ ಮೋಟಾರ ಸೈಕಲ್ ನಂಬರ್ ಕೆಎ27 ಕೆ6937 ನೇದ್ದನ್ನು ಅಪಘಾತ ಪಡಿಸಿದ ವಾಹನ ಅಂತಾ ಫಿರ್ಯಾದಿದಾರರಿಗೆ ಸಹಾಯ ಮಾಡುವ ಉದ್ದೇಶದಿಂದ ತೋರಿಸಿ ಆರೋಪಿಯನ್ನು ಪ್ರಕರಣದಲ್ಲಿ ಸುಳ್ಳಾಗಿ ಸೃಷ್ಟಿಸಿ ಆತನ ಮೇಲೆ ದೋಷಾರೋಪಣೆ ಪತ್ರವನ್ನು ತಯಾರಿಸಿರುವಿರಿ.

ಶ್ರೀಮತಿ ಗಿರಜವ್ವಾ ಇವಳಿಗೆ ದಿನಾಂಕ : 25–08–2006 ರಂದು ಯಾವುದೋ ವಾಹನ ಅಪಘಾತಪಡಿಸಿದ್ದರಿಂದ ಅವಳು ಸ್ಥಳದಲ್ಲಿಯೇ ಮೃತಪಟ್ಟ ಹಿನ್ನೆಲೆಯಲ್ಲಿ ತಡಸ ಪೊಲೀಸ್ ಠಾಣೆ ಗುನ್ನಾ ನಂ. 48/2006 ಕಲಂ 279, 304(ಎ) ಐಪಿಸಿ ಮತ್ತು 134 ಸಹಕಲಂ 187 ಎಮ್.ವ್ಹಿ ಆ್ಯಕ್ಟ್ ರಲ್ಲಿ ಅಪರಾಧ ಪ್ರಕರಣವು ದಾಖಲಾಗಿದ್ದು, ಮೃತಳ ಸಂಬಂಧಿಕರಿಗೆ ಸಹಾಯ ಮಾಡುವ ಉದ್ದೇಶದಿಂದ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಮೇಲಾಧಿಕಾರಿಗಳಿಂದ ಪಡೆದ "ಸಿ" ಅಂತಿಮ ವರದಿಯನ್ನು ಮರೆಮಾಚಿ ಆರೋಪಿಯ ಮೇಲೆ ದೋಷಾರೋಪಣೆ ಪತ್ರವನ್ನು ತಯಾರಿಸಿ ಘನ ನ್ಯಾಯಾಲಯಕ್ಕೆ ಸಲ್ಲಿಸಿ ಕಾನೂನಿನ ವಿರುದ್ಧ ನಡೆದುಕೊಂಡಿರುವಿರಿ."

ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 22–11–2012ರ ಆದೇಶದಲ್ಲಿ ಅರ್ಜಿದಾರರ ಒಂದು ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ಮುಂದೂಡಿದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 22–06–2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪ್ರಕರಣದಲ್ಲಿ ಮಹತ್ವದ ದಾಖಲೆಯಾದ ಮಾನ್ಯ ಜಿಲ್ಲಾ ನ್ಯಾಯಾಲಯ, ಎಮ್.ಎ.ಸಿ.ಟಿ. (ತ್ವರಿತ ನ್ಯಾಯಾಲಯ) ಹಾವೇರಿ, ಇವರು ದಿನಾಂಕ : 03–09–2010ರಂದು ಹೊರಡಿಸಿದ ಆದೇಶದಲ್ಲಿ ಪ್ರಕರಣ ಸಂಖ್ಯೆ : ಎಂ.ವಿ.ಸಿ. 67/2009ಯಲ್ಲಿ ಕೇವಲ ವಿಮಾ ಕಂಪನಿಯಿಂದ ಪರಿಹಾರ ಮೊತ್ತವನ್ನು ಕ್ಲೇಮು ಮಾಡುವುದಕ್ಕಾಗಿ ರಚಿಸಿದ ಕಥೆಯೆಂದು ಸ್ಪಷ್ಟವಾಗಿ ಗೋಚರವಾಗುತ್ತದೆ ಎಂದು ಅಭಿಪ್ರಾಯಿಸಿರುವ ಹಿನ್ನೆಲೆಯಲ್ಲಿ ಆ.ಪೊ.ಅ. ರವರ ವಿರುದ್ಧದ ಆರೋಪ ಸಾಬೀತಾಗಿದ್ದು ಅವರಿಗೆ ವಿಧಿಸಿದ ದಂಡನೆಯೂ ಸಹಾ ಸಮಂಜಸವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 160 ಪೊಸಿಅ 2013, ಬೆಂಗಳೂರು, ದಿನಾಂಕ : 17–03–2014.**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಲ್. ವೇಣುಗೋಪಾಲ್, ಪಿ.ಐ. ಜಾಗೃತ ದಳ, ಹೆಸ್ಕಾಂ, ಬೆಳಗಾವಿ ಠಾಣೆ, ಬೆಳಗಾವಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

**P.R. 343**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ನರಹರಿ, ಸಿ.ಹೆಚ್.ಸಿ.–370, ಕೊಂಚಾವರಂ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಪಿಆರ್/176/ಗು/2012, ದಿನಾಂಕ : 13–07–2012.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಅಪೀಲು/73/ಈವ/2012/1017, (ಆ.ಪು.ಸಂ. 314/ಈವ/2013) ದಿನಾಂಕ: 04–07–2013.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 12–09–2013.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)59/2013–14, ದಿನಾಂಕ : 04–01–2014.

**ಪ್ರಸ್ತಾವನೆ :**

ಶ್ರೀ ನರಹರಿ, ಸಿ.ಹೆಚ್.ಸಿ–370, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕೊಂಚಾವರಂ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ನೀವು ರೋಡಿನಲ್ಲಿ ಬರುವ–ಹೋಗುವ ವಾಹನಗಳನ್ನು ನಿಲ್ಲಿಸಿ ಅವರಿಂದ ಹಣ ವಸೂಲಿ ಮಾಡುವುದು ರಾತ್ರಿ ಪೊಲೀಸ್ ಠಾಣೆಯಲ್ಲಿ ಎಸ್.ಎಚ್.ಓ. ಕರ್ತವ್ಯದಲ್ಲಿ ನಿರತನಾಗಿರುವಾಗ ಠಾಣೆಯ ಎದುರು ರಸ್ತೆ ಮೇಲೆ ನಿಂತು ವಾಹನಗಳನ್ನು ನಿಲ್ಲಿಸಿ ಹಣ ವಸೂಲಿ ಮಾಡಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ".

ಮೇಲೆ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 13–07–2012ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ತಿಂಗಳ ಕಾಲ ಮುಂದೂಡಿದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 04–07–2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಅರ್ಜಿದಾರರ ಆರೋಪಗಳನ್ನು ಅಲ್ಲಗಳೆಯುವ ಯಾವುದೇ ವಿಷಯಗಳು ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 142 ಪೊಸಿಅ 2013, ಬೆಂಗಳೂರು, ದಿನಾಂಕ : 17–03–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನರಹರಿ, ಸಿ.ಹೆಚ್.ಸಿ–370, ಕೊಂಚಾವರಂ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

**P.R. 344**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59